# ರೂಪತಾರಾ



ಫೆಬ್ರವರಿ, 1982

ರೂ 2/=




ಹೊಸ ವರ್ಷದ ಪ್ರಥಮ ಸಂಚಿಕೆಯ ಕೊಡುಗೆಯಾಗಿ "ರೂಪತಾರಾ" ನೀಡಿರುವ ಡಾ॥ ರಾಜಕುಮಾರ್‌ರವರ ಮುಗ್ಧ, ಮಂದಸ್ಮಿತ, ಸುಂದರ ವರ್ಣಚಿತ್ರದ ಸೊಗಸು ಅಭಿಮಾನಿಗಳನ್ನು ಹರ್ಷದ ಎಲ್ಲೆ ಮೀರುವಂತೆ ಮಾಡಿದೆ. "1982ರಲ್ಲಿ ನಟನಟಿಯರ ನಿರ್ಧಾರ ಹೀಗಿರಬಹುದೆ?" ಕಲ್ಪಿತ ಬರಹ, ಸಹಜವಾಗಿ ಆ ಕಲಾವಿದರೇ ತಮ್ಮ ಅನಿಸಿಕೆಗಳನ್ನು ನುಡಿದಷ್ಟು ನೈಜವಾಗಿತ್ತು. ಇದೊಂದು ಅತ್ಯಂತ ಭಿನ್ನ, ನವನೂತನ ಹಾಗೂ ವೈವಿಧ್ಯಪೂರ್ಣ "ಚಿತ್ರಸಹಿತ ಕಿರು ಲೇಖನ". ತಂದೆ ಮಕ್ಕಳು (ಡಾ॥ ರಾಜ್ ಹಾಗೂ ಮಾ। ಲೋಹಿತ್) ಒಟ್ಟಾಗಿ ನಟಿಸಿ, ಭಾರಿ ಟೈಕ್ಕಿಂಗ್ ಸ್ಕೋಪ್ ಪಡೆದುಕೊಳ್ಳಬಹುದಾದ "ಭಕ್ತ ಪ್ರಹ್ಲಾದ" 70 ಎಂ.ಎಂ. ವರ್ಣದಲ್ಲಿ ತೆರೆಕಂಡರೆ, ಆ ಚಿತ್ರ ಕನ್ನಡ ಚಿತ್ರರಂಗದ ಚರಿತ್ರೆಯಲ್ಲೇ ಒಂದು ದಾಖಲೆ ಸ್ಥಾಪಿಸುವುದು ನಿಜ. 'ಎಸ್ಸೆಂ'ರವರ ಕಲ್ಪನೆ ನಿಜವಾಗಲೆಂದು, ಪ್ರತಿಯೊಬ್ಬ ಕನ್ನಡ ಚಿತ್ರಪ್ರೇಕ್ಷಕರ ಪರವಾಗಿ ನನ್ನ ಹಾರೈಕೆ.

ಶಿವಮೊಗ್ಗ — ಭವಾನಿ ಶಂಕರ ಡೋಂಗರೆ

[ಈ ಲೇಖನ ಮೆಚ್ಚಿ ನೂರಕ್ಕೂ ಹೆಚ್ಚು ಮಂದಿ ಬರೆದಿದ್ದಾರೆ. –ಸಂ.)

* * *

ಡಾ॥ ರಾಜಕುಮಾರರ 'ಮಹಾಕವಿ ಕಾಳಿದಾಸ' ಹಾಗೂ 'ನೃಪತುಂಗ' ಚಿತ್ರಗಳು 1982ರ ಆದಿಭಾಗದಲ್ಲಿ ತಯಾರಾಗುವ ಸಿದ್ಧತೆಯಲ್ಲಿವೆ. ಇವೆರಡೂ ಭಾರತದ ವ ಕರ್ನಾಟಕದ ಐತಿಹಾಸಿಕ ಘಟನೆಗಳ ಮತ್ತು ವ್ಯಕ್ತಿಗಳ ಕುರಿತಾದ ಚಿತ್ರಗಳು. ಕಾಳಿದಾಸ ಗುಪ್ತಸಾಮ್ರಾಜ್ಯದ ಕವಿ; ಶಾಕುಂತಲದಂಥ ಕೃತಿಯ ಕರ್ತೃ. ನೃಪತುಂಗ ಕರ್ನಾಟಕದ ಹಿರಿಮೆ ಮೆರೆದ 'ಕಾವೇರಿಯಿಂದಮಾ ಗೋದಾವರಿವರಮಿರ್ದ' ನಾಡನಾಳಿದ ಚಕ್ರವರ್ತಿ. ರಾಷ್ಟ್ರಕೂಟರ ಘನವಂತ ದೊರೆ. ಇಂಥ ವ್ಯಕ್ತಿಗಳ ಬಗ್ಗೆ ಚಿತ್ರ ಮಾಡುವಾಗ ಇತಿಹಾಸದ ಕೂಲಂಕಷ ಸಿಂಹಾವಲೋಕನ, ಹಾಗೂ ವಿಶ್ಲೇಷಣೆ ತೀರಾ ಅತ್ಯಗತ್ಯ. ಯಾಕೆಂದರೆ ಈ ವ್ಯಕ್ತಿಗಳು ನಮ್ಮ ಐತಿಹಾಸಿಕ ಗರಿಮೆಯ ಮಹಾನ್ ರತ್ನಗಳು ಮತ್ತು ನಮ್ಮ ದೇಶದ ಕಾಲಗತಿಯಲ್ಲಿ ಚಲಿಸಿ ಆ ಯುಗಕ್ಕೆ ಮಹತ್ವವನ್ನುಂಟು ಮಾಡಿದವರು. ಚಿತ್ರ ನಿರ್ಮಾಣ ಮಾಡುವ ಪೂರ್ವದಲ್ಲಿ ನಾಲ್ಕೈದು ಜನ ಇತಿಹಾಸ ತಜ್ಞರು, ಸಾಹಿತಿಗಳು, ವಿದ್ವಾಂಸರೆಲ್ಲ ಕೂಡಿ, ಚರ್ಚಿಸಿ, ಪರಾಂಬರಿಸಿ ಸೂಕ್ತ ವಿಶ್ಲೇಷಣೆಯೊಂದಿಗೆ ಚಿತ್ರನಾಟಕ ರಚಿಸಬೇಕು. ಬರೆದುದೇ ನಾಟಕ, ಹೇಳುವುದೇ ಕತೆ, ಹಾಡಿದುದೇ ಹಾಡಾಗಬಾರದು. ಕೇವಲ ಚಿತ್ರನಾಟಕ ರಚನೆಯಲ್ಲದೇ ಪ್ರತಿ ಹಂತದಲ್ಲಿಯೂ ಕಥಾವಸ್ತು ಹಾಗೂ ಅದರ ಐತಿಹ್ಯ ಮಹತಿ ಅರಿತವರ ನುರಿತ ಪಕ್ವ ನಿರ್ದೇಶನವೂ ಅತ್ಯಗತ್ಯ. ಇದರಲ್ಲಿ ಕೇವಲ ಅಪಕ್ವ, ಬಾಲಿಶ ಹಾಗೂ ಅನ್ಯ ಭಾಷಿಕರ ನಿರ್ದೇಶನದಿಂದ ಐತಿಹಾಸಿಕ ಆಭಾಸ ಉಂಟಾಗುವುದಲ್ಲದೇ ಇತಿಹಾಸಕ್ಕೆ ಅವಮಾನ ಉಂಟಾಗುವದರಲ್ಲಿ ಸಂದೇಹವಿಲ್ಲ. (ಉದಾ: ಮಯೂರ) ಕಾರಣ ಈ ದಿಶೆಯಲ್ಲಿ ಡಾ॥ ರಾಜ್ ತಂಡ ಯೋಚಿಸುವರೇ?

ನರಗುಂದ ದಂಡಾಪುರ — ಸುಮತಿ ಸುರೇಶ ಕುಲಕರ್ಣಿ

* * *

ಕನ್ನಡ ಚಿತ್ರರಂಗದ ಹಿರಿಯ ಸಾಹಿತಿ ಚಿ. ಸದಾಶಿವಯ್ಯನವರ ನಿಧನದ ವಾರ್ತೆ ಅತೀವ ದುಃಖವನ್ನುಂಟುಮಾಡಿತು. ಅಭಿನೇತ್ರಿ ಸಾವಿತ್ರಿಯವರ ನಿಧನದ ಆಘಾತದಿಂದ ಚೇತರಿಸಿಕೊಳ್ಳುವ ಮೊದಲೇ ಹೊಸ ವರ್ಷದ ಆರಂಭದಲ್ಲಿ ಅಭಿಮಾನಿಗಳಲ್ಲಿ ಮತ್ತೊಮ್ಮೆ ತಲ್ಲಣವನ್ನುಂಟುಮಾಡಿದ ಬರಸಿಡಿಲಿದು! ನೂರಕ್ಕೂ ಹೆಚ್ಚು ಕನ್ನಡ ಚಿತ್ರಗಳಿಗೆ ಸಾಹಿತ್ಯ ನೀಡಿ ಚಿತ್ರಸಾಹಿತ್ಯ ರಂಗದಲ್ಲಿ ವಿಕ್ರಮ ಸ್ಥಾಪಿಸಿರುವ ಚಿ. ಉದಯಶಂಕರ್ ಯಂತಹ ಪ್ರತಿಭಾವಂತರನ್ನು ಕೊಡುಗೆಯಾಗಿ ನೀಡಿ ತಮ್ಮ ಇನ್ನೊಬ್ಬ ಪುತ್ರ ಚಿ. ದತ್ತುರಾಜ್‌ರ ('ಕೆರಳಿದ ಸಿಂಹ' ಮತ್ತು 'ರುದ್ರಿ' ಚಿತ್ರಗಳ ನಿರ್ದೇಶಕರು) ಅಭ್ಯುದಯವನ್ನು ಸರಿಯಾಗಿ ಕಾಣುವ ಮೊದಲೇ ನಿಧನರಾದುದು ದುರ್ದೈವ. ಭಗವಂತನು ಮೃತರ ಆತ್ಮಕ್ಕೆ ಶಾಂತಿಯನ್ನು ದಯಪಾಲಿಸಲಿ.

ಮೈಸೂರು — ಎಂ. ಎನ್. ಮುರಳೀಧರ

* * *

ಹೊಡೆದಾಟ-ಬಡಿದಾಟ, ಮಲಯಾಳಂ ಸೆಕ್ಸ್ ಸಿನಿಮಾಗಳಿಗಿಂತ ನಮ್ಮ ಪುಟ್ಟಣ್ಣ, ಹಾಗೂ ದೊರೆ-ಭಗವಾನ್, ಸುಬ್ಬರಾವ್ ನಿರ್ದೇಶನದ ಚಿತ್ರಗಳು ಹೆಚ್ಚಿನ ಅಪಾಯಕಾರಿ.ಪುಟ್ಟಣ್ಣ ಹಾಗೂ ದೊರೆ-ಭಗವಾನ್ ಚಿತ್ರಗಳನ್ನು ಸಾಮಾನ್ಯವಾಗಿ ಹೆಚ್ಚಿನ ಸಂಖ್ಯೆಯಲ್ಲಿ ನೋಡುವವರು ಮಹಿಳಾ ಪ್ರೇಕ್ಷಕರು. ಹೆಣ್ಣಿನ ಎಲ್ಲ ಸಮಸ್ಯೆಗಳಿಗೆ ಆತ್ಮಹತ್ಯೆಯೆ ಪರಿಹಾರ ಎಂದು ಸಾರುವ ಇಂತಹ ಪ್ರತಿಭಾವಂತ ಪ್ರಸಿದ್ಧ ನಿರ್ದೇಶಕರ ಚಿತ್ರಗಳು ದುರ್ಬಲ ಮನಸ್ಸಿನ ಮಹಿಳೆಯರ ಮೇಲೆ ಎಂತಹ ಪರಿಣಾಮ ಬೀರುತ್ತವೆ ಎಂಬುದನ್ನು ನಮ್ಮ ಖ್ಯಾತ ನಿರ್ದೇಶಕ ಮಹನೀಯರು ಯೋಚಿಸಿದರೆ ಒಳ್ಳೆಯದು.

ಗಾಳಿಮಾತು, ಚಂದನದ ಗೊಂಬೆ, ರಂಗನಾಯಕಿ ಚಿತ್ರಗಳ ನಾಯಕಿ ತನ್ನ ಎಲ್ಲ ಸಮಸ್ಯೆಗಳಿಗೆ ಪರಿಹಾರ ಎಂದು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ತಾಯಿಯ ಮಡಿಲಲ್ಲಿ ಚಿತ್ರದ ನಾಯಕಿ ತನ್ನ ಜೊತೆಯಲ್ಲಿ ತನ್ನ ತಮ್ಮ-ತಂಗಿಯರೊಂದಿಗೆ ಸಾಮೂಹಿಕವಾಗಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ದುರಂತ ಪಾತ್ರಗಳ ನಿರ್ವಹಣೆಯಲ್ಲಿ ಪ್ರಸಿದ್ಧರಾದ ಕಲ್ಪನಾ, ಮೀನಾಕುಮಾರಿಯವರ ನಿಜ ಜೀವನವು ಕೂಡ ದುರಂತಮಯವಾಗಿಯೇ ಮುಕ್ತಾಯ ಹೊಂದಿತು ಎಂಬ ಸಂಗತಿ ಎಲ್ಲರಿಗೂ ತಿಳಿದಿರುವ ವಿಷಯ. ಸಿನಿಮಾದಂತಹ ಪ್ರಭಾವಶಾಲಿ ಸಮೂಹ ಮಾಧ್ಯಮಗಳ ಮೂಲಕ ಜನರಿಗೆ ನಾವು ಏನು ಹೇಳುತ್ತಿದ್ದೇವೆ ಎಂಬುದನ್ನು ಒಂದು ಕ್ಷಣ ಯೋಚಿಸಿ ಚಿತ್ರ ನಿರ್ದೇಶಿಸಿದರೆ ಒಳ್ಳೆಯದು.

ಬೆಂಗಳೂರು — ಹುಲಿಮಂಗಲ ರಾಮಶೇಷ

* * *

ಕಳೆದ ಜನವರಿ ಸಂಚಿಕೆಯಲ್ಲಿ ಪ್ರಕಟವಾದ "ಅಸಹನೆಗೆ ಹಿಂಸೆಯಲ್ಲಿ ಪರ್ಯವಸಾನ" ಲೇಖನ ಓದಿ ತುಂಬಾ ಬೇಸರವಾಯಿತು. "ತಾರಾ ಭಕ್ತರ ಸಂಘ" ಗಳಲ್ಲಿನ ತಾರಾ ಭಕ್ತರೆಲ್ಲ ಕೇವಲ ಮೂರ್ಖರು ಅನ್ನಿಸಿತು.

ಹಿಂದೆ ವಿಷ್ಣುವಿನ ಮೇಲೆ ರಾಜ್ ಭಕ್ತರೆನ್ನಲಾದ ಕೆಲವರಿಂದ ಎರಡು ಬಾರಿ ಹಲ್ಲೆ ನಡೆಯಿತು. ಅದೇ ಇಂದು ವಿಷ್ಣು ಭಕ್ತರಿಂದ ಬೋರೇಗೌಡರ ಮೇಲೆ ಹಲ್ಲೆ ನಡೆಯಿತು!

ಸ್ವಲ್ಪವೂ ವಿಚಾರಶಕ್ತಿ ಇಲ್ಲದೇ ಈ ರೀತಿ ಅಮಾನುಷವಾಗಿ ಹಲ್ಲೆ ಎಸಗಿದವರನ್ನು ಮೂರ್ಖರೆನ್ನದೇ ಇನ್ನೇನನ್ನಬೇಕು?

ಚಿತ್ರವೊಂದರಲ್ಲಿಯ ನಾಯಕನನ್ನು ಬದಲಾಯಿಸಿದರು ಎನ್ನುವ ಒಂದು ಸಾಮಾನ್ಯ ಕಾರಣಕ್ಕಾಗಿ ಬೋರೇಗೌಡರ ಮೇಲೆ ಹಲ್ಲೆ ಮಾಡಿದ ಮೂರ್ಖರ ಗೂಂಡಾಗಿರಿ ನಿಜವಾಗಿ ಸರ್ವವಿಧದಲ್ಲೂ ಖಂಡನೀಯ.

ಸಿದ್ದಾಪುರ — ಸತೀಶ್ ಕುಮಾರ್ ಹೆಗಡೆ

* * *

ಜನವರಿ ಸಂಚಿಕೆಯ "ಅಸಹನೆಗೆ ಹಿಂಸೆಯಲ್ಲಿ..." ಲೇಖನದ ಬಗೆಗೆ ಪ್ರತಿಕ್ರಿಯೆ : ಹಿಂದೊಮ್ಮೆ ವಿಷ್ಣು ಮೇಲೆ ಹಲ್ಲೆ ನಡೆದಾಗ ಡಾ॥ ರಾಜ್‌ರು ಹೇಳಿಕೆ ಕೊಡಲಿಲ್ಲವೆಂಬ ಕೂಗೆದ್ದಾಗ ಶ್ರೀಮತಿ ರಾಜ್ ಅವರು "ಯಾರು ಏನೇ ಮಾಡಿದರೂ ನಾವು ಹೇಗೆ ಹೊಣೆಗಾರರಾಗುತ್ತೇವೆ..." ಎಂಬುದನ್ನು 'ವಿಂಧ್ಯಾ' ಅವರು ಸತ್ಯವೆಂದು ಒಪ್ಪಿದ್ದಾರೆ. ಹಾಗಾದರೆ ಬೋರೇಗೌಡರ ಮೇಲೆ ವಿಷ್ಣು ಅಭಿಮಾನಿಗಳು ಹಲ್ಲೆ ನಡೆಸಿದರೆ ಅದಕ್ಕೆ ವಿಷ್ಣು ಹೇಗೆ ಹೊಣೆಗಾರರು? ವಿಷ್ಣು ಬೋರೇಗೌಡರನ್ನು ನೋಡಿಲ್ಲ, ವಿಚಾರಿಸಿಲ್ಲ ಎಂದು 'ವಿಂಧ್ಯಾ' ಅವರು ದೂರುವುದು ಎಷ್ಟು ಸರಿ?

ಬೋರೇಗೌಡರ ಮೇಲೆ ನಡೆದ ಹಲ್ಲೆ ಖಂಡನಾರ್ಹ. ನಾನು ರಾಜ್‌ಕುಮಾರ್ ವಿರೋಧಿಯೂ ಅಲ್ಲ, ವಿಷ್ಣು ಅಭಿಮಾನಿಯೂ ಅಲ್ಲ. ನನಗೆ ಸತ್ಯವೆಂದು ಕಂಡ ವಿರೋಧಾಭಾಸವನ್ನು ಇಲ್ಲಿ ತೋರಿಸಿದ್ದೇನೆ, ಅಷ್ಟೆ.

ಬೆಂಗಳೂರು — ಮಂಜುಳಾ ಆಚಾರ್

(ಇದೇ ಅಭಿಪ್ರಾಯ ವ್ಯಕ್ತಪಡಿಸಿ ಪ್ರಕಾಶ್, ಪ್ರಸಾದ್ ನಾರಾಯಣ್ ಬರೆದಿದ್ದಾರೆ.]

[ವಿಷ್ಣು ಹೊಣೆಗಾರರೆಂದು ನಾವೂ ಹೇಳಿಲ್ಲ. ಮಾನವೀಯತೆ ದೃಷ್ಟಿಯಿಂದಲಾದರೂ ವಿಷ್ಣು ಬೋರೇಗೌಡರನ್ನು ನೋಡಿ, ವಿಚಾರಿಸಬೇಕಿತ್ತು. ಮಿಕ್ಕ ಅಂಶಗಳು ವಿಚಾರಿಸಿದಾಗ ಕೇಳಿಬಂದವು – ಲೇಖಕರಾಗಲಿ, ರೂಪತಾರಾ ಆಗಲಿ ಅಲಿಪ್ತರು; ಕಲೆಯ, ಪ್ರತಿಭೆಯ ಅಭಿಮಾನಿಗಳು ಮಾತ್ರ. – ಸಂ.]

* * *

ಜನವರಿ 1982ನೆಯ ರೂಪತಾರಾ ಓದಿದಾಗ, ಬೋರೇಗೌಡರ ಮೇಲೆ ಕೆಲವು ಗೂಂಡಾಗಳು ಹಲ್ಲೆ ನಡೆಸಿರುವ ವಿಷಯವನ್ನು ಓದಿ ತುಂಬ ವ್ಯಥೆಯಾಯಿತು. ಹೊಸ ವರುಷದ ಮೊದಲನೇ ತಿಂಗಳಿನ ಈ ಪತ್ರಿಕೆಯಲ್ಲಿ ಇಂತಹ ವಿಷಯ ಬಂದಿರುವುದು ಕಂಡಾಗ ಇಂಥಾ ಇನ್ನೆಷ್ಟು ಹಲ್ಲೆ ನಡೆಯುವುದೋ ಎನಿಸಿದೆ. ಚಿತ್ರರಂಗದಲ್ಲಿ ಯಾವ ನಿರ್ಮಾಪಕನಿಗೇ ಆದರೂ ಸಹ ಹಣ ಗಳಿಸುವ ಆಸೆ ಇದ್ದೇ ಇರುತ್ತದೆ. ಇಲ್ಲದೇ ಇದ್ದರೆ ನಿರ್ಮಾಪಕನಾಗಲು ಸಾಧ್ಯವಿಲ್ಲ. ನಿರ್ಮಾಪಕರಾದ ಬೋರೇಗೌಡರು, 'ಅಂತ' ಚಿತ್ರದಿಂದ ದ್ವಿತೀಯ ನಟರೆನ್ನಿಸಿಕೊಳ್ಳುತ್ತಿರುವ ಅಂಬರೀಷ್‌ರನ್ನು ತಮ್ಮ ಚಿತ್ರಕ್ಕೆ ಹಾಕಿಕೊಂಡುದು ಹಣ ಗಳಿಸುವುದಕ್ಕೋಸ್ಕರ. ಈ ವಿಷಯ ವ್ಯಾಪಾರಸ್ಥರಿಗೆ ಚೆನ್ನಾಗಿ ತಿಳಿದಂತಹ ಮಾತು. 'ಗಾಳಿಮಾತು' ಚಿತ್ರಕ್ಕೆ ಅನಂತನಾಗ್ ತೆಗೆದು ಜೈಜಗದೀಶ್ ಹಾಕಿಕೊಳ್ಳಲಿಲ್ಲವೇ. ಮುಂದಾಲೋಚನೆಯಿಲ್ಲದೇ ವಿಷ್ಣುವರ್ಧನ್ ಅಭಿಮಾನಿಗಳೆಂದು ಹೇಳಿ, ವಿಷ್ಣುವರ್ಧನ್ ಜನಪ್ರಿಯತೆಗೆ ಮಸಿ ಬಳಿಯಲು ಹೊರಟಂತಿದೆ. ಕನ್ನಡದಲ್ಲಿ ಈ ರೀತಿ ನಡೆದರೆ

ವೈಶಿಷ್ಟ್ಯದಲ್ಲಿ ವೈಶಿಷ್ಟ್ಯ ಎಣೆಯಿಲ್ಲದ

# JOHNSON®

# ಪ್ರಿನ್ಸೆಸ್

## ಆಟೊಮ್ಯಾಟಿಕ್ ಕಾಯಿಲ್ ಸ್ಟವ್

ಪ್ಲೇಟಿನ ಅಕ್ಕಪಕ್ಕಗಳಲ್ಲಿ ಗಾಳಿ
ಧಾರಾಳವಾಗಿರಲು 'ಕಿಟಕಿಗಳು
ಬಿಸಿ ಗಾಳಿ ಒಮ್ಮೆಲೇ ಹೊರಬಂದು
ಸ್ಪರ್ಶಕ್ಕೆ ಸ್ಟವ್ ತಣ್ಣಗಿರುವುದು.

ತಂತಿಗಳಿಗೆ ಶ್ರೇಷ್ಠವುಟ್ಟದ
ಸೆರಾಮಿಕ್ ಬಿಯಡ್ಸ್
ಇನ್ಸುಲೇಷನ್ ಸುಟ್ಟು ಹೋಗುವ
ಅಪಾಯವಿಲ್ಲ.




ಎರಡು ತುಂಡುಗಳ ಜೋಡಣೆ
ಕಾಯಿಲ್ ನಿಂದ ಸಿಮ್ಮೆರ್‌ಸ್ಟಟ್ ಹೆಚ್ಚು
ಶಾಖವೇರದಂತೆ ತಡೆಯುವುದು.

ಪೈಲೆಟ್ ಲ್ಯಾಂಪ್ ಕಾಯಿಲ್ ಸ್ಟವ್
'ಉರಿಯುತ್ತಿರುವುದನ್ನೂ'
'ಆರಿಹೋಗಿರುವುದನ್ನೂ'
ಸೂಚಿಸುವುದು.

## ವಿಶಿಷ್ಟವಾದ ಸಿಮ್ಮರ್‌ಸ್ಟಾಟಿಂದಾಗಿ ಶೇ. 30ರಷ್ಟು ವಿದ್ಯುಚ್ಛಕ್ತಿ ಉಳಿತಾಯ

ಈ ಕಾಯಿಲ್ ಸ್ಟವ್ ಯಾವುದೇ 6 ಪ್ರಿ-ಸೆಟ್ ಉಷ್ಣಾಂಶಕ್ಕೆ ತಲುಪಿದಾಗ ತಾನಾಗಿಯೇ ಮುಚ್ಚಿಕೊಂಡು ಸ್ಥಗಿತಗೊಳ್ಳುವುದು. ಹೆಚ್ಚಿನ ಉಷ್ಣದ ತಾಪದಿಂದ 'ಎಲಿಮೆಂಟ್' ರಕ್ಷಿಸುವುದು ದೀರ್ಘ ಬಾಳಿಕೆಗೆ ವಿಶ್ವಾಸಾರ್ಹ ಹಾಗೂ ಬದಲಿ ಭಾಗಗಳಲ್ಲಿ ಹೆಚ್ಚಿನ ಉಳಿತಾಯ. ಸತತ ಅಡಿಗೆಗೆ ಬಹು ಸೂಕ್ತ.

ಡಬಲ್ ಕಾಯಿಲ್ ನಮೂನೆಗಳಲ್ಲೂ ಲಭಿಸುವುದು.

**JOHNSON®**

## ಪ್ರಿನ್ಸೆಸ್ ಭಾರತದ ಏಕೈಕ ಆಟೋಮ್ಯಾಟಿಕ್ ಕಾಯಿಲ್ ಸ್ಟವ್

Parade/BE/8123

ಇನ್ನು ಮುಂದೆ ನಿರ್ಮಾಪಕರು ಕನ್ನಡದಲ್ಲಿ ಹೆಚ್ಚುವರೆ?

ಹೊಳೆನರಸೀಪುರ ಎಚ್. ಆರ್. ಕೃಷ್ಣಮೂರ್ತಿ

* * *

## ಚರ್ವಿತ ಚರ್ವಣ

ಸ್ವಲ್ಪ ತಡವಾಗಿಯೇ ಸಿಕ್ಕ ಜನವರಿ ತಿಂಗಳ 'ರೂಪತಾರಾ' ಓದಿದ ನಂತರ ಈ ಕಾಗದ ಬರೆಯಬೇಕೆನ್ನಿಸಿತು. '81ರಲ್ಲಿ ಬಿಡುಗಡೆಯಾದ ರಾಜ್‌ರವರ 'ಕೆರಳಿದ ಸಿಂಹ' ಚಿತ್ರದ ಬಹುಮಾನಿತ 'ವಿಮರ್ಶೆಯಲ್ಲಿ ವಿಮರ್ಶಕರು, ಚಿ। ಉದಯಶಂಕರ್ "ಈ ಬಾರಿ ರಾಜ್ ಚಿತ್ರಕ್ಕೆ ಸಂಭಾಷಣೆ ಬರೆಯುವಲ್ಲಿ ಹೆಚ್ಚಿನ ನಿಗಾ ವಹಿಸಿದ್ದಾರೆ" ಎನ್ನುವ ಮಾತು ಸ್ವಲ್ಪ ಗೊಂದಲಕ್ಕೆಡೆಯಾಗಿದೆ. ಕಾರಣ, ರಾಜ್ ಚಿತ್ರಕ್ಕೆ ಅದರಲ್ಲೂ ಅವರದೇ ಪಾತ್ರಕ್ಕೆ ಅವರು ಬರೆಯುವ ಮಾತುಗಳು ಸಾಧಾರಣ ಒಂದೇ ಆಗಿರುತ್ತವೆ. ಮಗನ ಪ್ರೇಮ ಬಿದ್ದು ಹೋದುದರ ಕಾರಣ ತಿಳಿದುಬರಲು ಹೋಗಿದ್ದ ತಾಯಿಯನ್ನು ನೋಡಿದ ನಾಯಕ "ನಿನ್ನ ಮನ ನೋಯುವಂತಹ ಒಂದು ಕಾರ್ಯವನ್ನೂ ನಿನ್ನ ಮಗ ಮಾಡೋಲ್ಲ ಅಮ್ಮ" ಎಂದು ಹೇಳುವ ಮಾತು ಅದೆಷ್ಟು ಚಿತ್ರಗಳಲ್ಲಿ ಇಲ್ಲ? ಸಂದರ್ಭಕ್ಕನುಸಾರ ಇವೇ ಮಾತುಗಳನ್ನೀಗ ಆಡುತ್ತಾರೆಂದು ಊಹಿಸಿಬಿಡುವಷ್ಟು ಚರ್ವಿತಚರ್ವಣಗಳಾಗಿವೆ ಅವರ ಸಂಭಾಷಣೆ. ಹಾಗೆಯೇ ಹಾಡಿನ ಬಗೆಗೂ ಒಂದು ಮಾತು; "ಸಂಜೆಯ ವೇಳೆ ತಂಪು ಗಾಳಿ" ಎನ್ನುವ ಪದ ಕೆರಳಿದ ಸಿಂಹದಲ್ಲೇ ಎರಡು ಹಾಡಿನಲ್ಲಿದೆ. "ನೂರು ನದಿಯೂ ಸೇರಿ ಹರಿದು ಬಂದರೇನು? ಜನರು ಅದರ ರಭಸ ಕಂಡು ಕಡಲು ಎನುವರೇನು? ಕೋಟಿ ದೇವರೆಲ್ಲ..." ನೆನಪಿದೆಯೆ? ಕನ್ನಡ ಚಿತ್ರವೊಂದಕ್ಕೆ ಇವರೇ ಬರೆದ ಆ ಸಾಲುಗಳು ಈ ಚಿತ್ರದಲ್ಲೂ ಇವೆ. ಧಾಟಿ ಬದಲಾಗಿದೆ ಅಷ್ಟೆ. ಹೊಸತಾದ ಸಂಭಾಷಣೆ, ಹುಲುಸಾದ ಪದಗಳ ಹಾಡು ಬಂದರೆ ಕೇಳಿ ಆಗುವ ಆನಂದ ತಿರುಗಾಮುರುಗಾ ಅವೇ ಪದಗಳ ಬಳಕೆಯೊಂದಿಗೆ ಬಂದ ಗೀತೆಗಳಿಂದ ಬಂದೀತೆ?

'ಪರಸ್ಪರ' ಅಂಕಣದಲ್ಲಿ ಬರೆದ ಅನಿಸಿಕೆಗಾರರ ಪೈಕಿ ಮೂವರು 'ಹೈಲೈಟ್' ಎನ್ನುವ ಪದ ಬಳಸಿದ್ದನ್ನು ನೋಡಿದೆ. 'ನಮ್ಮ ವಿಮರ್ಶಕರಿಂದ' ವಿಭಾಗದಲ್ಲಿ ಕಾಣಿಸುತ್ತಿದ್ದ ಈ ಪದ ಎಲ್ಲರೂ ಬಳಸಿ ಅದನ್ನೇ ಉಪಯೋಗಿಸಿದರೆ ಚೆಂದ ಕಾಣುವುದೇ?

ದಾವಣಗೆರೆ ತ್ರಿನೇತ್ರ

* * *

## ಚಿತ್ರರಂಗ ಗಮನಿಸಲಿ

ಕನ್ನಡ ಚಿತ್ರ ಜಗತ್ತಿನ ಭೀಷ್ಮ, ಪಿತಾಮಹನೆನಿಸಿಕೊಂಡು ಕಣ್ಮರೆಯಾಗಿರುವ ಎಚ್. ಎಲ್. ಎನ್. ಸಿಂಹರವರ ಕೊಡುಗೆ ಕನ್ನಡ ಚಿತ್ರರಂಗದಲ್ಲಿ ಸರ್ವರಿಗೂ ತಿಳಿದ ವಿಷಯವೇ.

ಬದುಕಿನುದ್ದಕ್ಕೂ ಹೋರಾಟ ಮಾಡಿ ಚಿತ್ರರಂಗದಲ್ಲಿ ಏನನ್ನೂ ಸಂಪಾದಿಸದೆ ಬರಿಗೈಯಲ್ಲಿ ಬಯಲಾಗಿ ಹೋದ ಈ ವ್ಯಕ್ತಿ ಕಲಾ ಜಗತ್ತಿಗೆ ಬಿಟ್ಟು ಹೋದ ಆಸ್ತಿಯೆಂದರೆ ತಮ್ಮ ಏಕೈಕ ಪುತ್ರ ಎಚ್. ಎಲ್. ಶೇಷಚಂದ್ರ (ರಾಜ್ಯ ಭೂ ಬ್ಯಾಂಕ್ ನೌಕರ), ತಂದೆಯಂತೆ ಪ್ರತಿಭಾನ್ವಿತ ಕಲಾವಿದ. ಚಿತ್ರಕಥೆಗಳನ್ನು ಬರೆದಿದ್ದಾರೆ. ಹಾಡುಗಳನ್ನು ಬರೆದಿದ್ದಾರೆ. ಒಳ್ಳೆಯ ಗಾಯಕ, ನಾಟಕಕಾರ, ಅಂತೆಯೆ ನಟನೂ ಹೌದು.

ರಾಜ್ಯ ಭೂ ಬ್ಯಾಂಕ್ ನೌಕರಿಯೇ ಜೀವನಕ್ಕಾಧಾರವಾಗಿ ಗತಕಾಲದ ತನ್ನ ತಂದೆಯ ವೈಭವವನ್ನು ನೆನೆದು ನಿಟ್ಟುಸಿರು ಬಿಡುವ ಮುಪ್ಪಿನ ತಾಯಿ, ತನ್ನ ಸಂಸಾರ ಇವುಗಳ ನಿರ್ವಹಣೆಗಾಗಿ ಜೀವನರಂಗದಲ್ಲಿ ಹೋರಾಟ ಮಾಡುತ್ತಿದ್ದಾರೆ.

ಚಿತ್ರರಂಗದಲ್ಲಿ ಎಚ್. ಎಲ್. ಎನ್. ಸಿಂಹರವರ ಹೆಸರಿನಿಂದ ಅವರ ಕೃಪಾಶ್ರಯದಿಂದ ಬೆಳೆದ ಉನ್ನತ ಕಲಾವಿದರು ನಿರ್ಮಾಪಕರಾಗಿದ್ದಾರೆ, ಹಾಗೂ ಉತ್ತಮ ಸ್ಥಿತಿವಂತರಾಗಿದ್ದಾರೆ. ಈ ವಿಷಯ ತಿಳಿದೂ ಸಹ ಇವರಾರಿಗೂ ಇದುವರೆಗೂ ಕರುಣೆ ಬಂದಿಲ್ಲವೆಂದು ತೋರುತ್ತದೆ. ಕಲಾವಿದರಿಗೆ ಮತ್ತು ಅವರ ಕುಟುಂಬಕ್ಕೆ ಪರಿಹಾರ ನೀಡುವಲ್ಲಿ ಕನ್ನಡ ಸಾಹಿತ್ಯ ಪರಿಷತ್ ಆಗಲಿ, ನಾಟಕ ಅಕಾಡೆಮಿಯವರಾಗಲಿ, ಚಿತ್ರರಂಗದ ಸಂಘ ಸಂಸ್ಥೆಗಳಾಗಲಿ, ಸರ್ಕಾರವಾಗಲಿ ನೆರವು ನೀಡದಿರುವುದು ತುಂಬಾ ಶೋಚನೀಯ ಸಂಗತಿಯಾಗಿದೆ.

ಈ ಬರಿಗೈಯ "ಸಿಂಹ"ದ ಮರಿ ಇಂದು ನಿಸ್ಸಹಾಯಕ ಸ್ಥಿತಿಯಲ್ಲಿದೆ. ಚಿತ್ರರಂಗ ಈ ಉತ್ತಮ ತಂದೆಯ ಉತ್ತಮ ಪುತ್ರನನ್ನೂ ಸ್ವಲ್ಪ ಬೆಳಕಿಗೆ ತರುವ ಪ್ರಯತ್ನ ಮಾಡಲಿ.

ಎಸ್. ಸಿದ್ಧವೀರಣ್ಣ

ಬೆಂಗಳೂರು ಕರ್ನಾಟಕ ರಾಜ್ಯ ಭೂ ಅಭಿವೃದ್ಧಿ ಬ್ಯಾಂಕು

* * *

ಸಂಪುಟ 5 ಫೆಬ್ರವರಿ, 1982 ಸಂಚಿಕೆ 11








ಸಂಪಾದಕ :
ಟಿ. ಸತೀಶ್ ಯು. ಪೈ

ಮುದ್ರಕರು, ಪ್ರಕಾಶಕರು :
ಮಣಿಪಾಲ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್
ಪ್ರೈವೇಟ್ ಲಿಮಿಟೆಡ್, ಮಣಿಪಾಲ ದ. ಕ.

ವರ್ಣಚಿತ್ರ ಮುದ್ರಣ :
ಮಣಿಪಾಲ ಪವರ್ ಪ್ರೆಸ್, ಮಣಿಪಾಲ ದ. ಕ.

ವಾರ್ಷಿಕ ಚಂದಾ :
ಅಂಚೆ ವೆಚ್ಚ ಸೇರಿ ರೂ. 26–00
ಬಿಡಿ ಪ್ರತಿ ರೂ. 2–00

ವಿವರಗಳಿಗೆ ಸಂಪರ್ಕಿಸಿ :
ರೂಪತಾರಾ, ಪ್ರೆಸ್ ಕಾರ್ನರ್, ಮಣಿಪಾಲ ದ. ಕ.




ಮುಖಪುಟ : "ಸಾಹಸ ಸಿಂಹ" ಚಿತ್ರದಲ್ಲಿ
ವಿಷ್ಣುವರ್ಧನ್ ಮತ್ತು ಕಾಜಲ್‌ಕಿರಣ್

# ಉಡುಪಿಯಲ್ಲಿ ಉಪಚಾರ




ಈ ಮಧ್ಯೆ ನಮಗೆ ಅಪರೂಪವಾಗುತ್ತಿದ್ದ ಸೌಹಾರ್ದ ಭೇಟಿಗಳು ಮತ್ತೆ ಆರಂಭವಾಗಿರುವುದೊಂದು ಶುಭ ಸೂಚನೆ. ಶಿವರಾಜ್ ಮೊದಲಿಂದಲೂ ಪತ್ರಕರ್ತರ ಬಗ್ಗೆ ಅಪಾರವಾದ ವಿಶ್ವಾಸ ಇಟ್ಟುಕೊಂಡವರು. ಸಹಾಯಕರಾಗಿ, ನಿರ್ವಾಹಕರಾಗಿ ಹಲವು ರೀತಿಯಲ್ಲಿ ಚಿತ್ರರಂಗಕ್ಕೆ ದುಡಿಯುತ್ತಲೇ ಪ್ರತಿ ಸಂದರ್ಭದಲ್ಲೂ ಪತ್ರಿಕೆ–ಜನತೆ ಸಂಪರ್ಕ ಇರಿಸಿಕೊಳ್ಳುತ್ತ ಬಂದವರು. ಎಷ್ಟು ದಿನ ಹೀಗೇ ಇರಲಿ ಒಂದು ಚಿತ್ರವಾದರೂ ಮಾಡಬೇಕು ಅಂದುಕೊಳ್ಳಲು ಕಾರಣಗಳು–ಘಟನೆಗಳು ಬಹಳಷ್ಟು. ಆಳನ್ನ ಆಳಾಗಿಯಲ್ಲದೆ ಯೋಗ್ಯತೆ ಗಳಿಸಿಕೊಂಡಮೇಲೂ ಅರಸಾಗಿಯೋ – ಸಮಾನನಾಗಿಯೋ ಕಾಣಲು ಒಲ್ಲದ ವ್ಯವಸ್ಥೆಯೊಂದು ಇನ್ನೂ ಅಸ್ತಿತ್ವದಲ್ಲಿದ್ದೇ ಇದೆ. ತೋರಾಣಿಕೆಗೆ ಸಮಾಜವಾದದ ಮಾತಾಡುತ್ತಿದ್ದರೂ ಒಳಗೊಳಗೇ ಯಥಾಸ್ಥಿತಿ ವಾದವನ್ನು ಎತ್ತಿಹಿಡಿಯುವ ಸ್ವಭಾವವನ್ನು ಉಳಿಸಿಕೊಂಡು ನಡೆಸಿಕೊಂಡು ಬರುತ್ತಿರುವ ಈ ವ್ಯವಸ್ಥೆ ಅದೂ ಚಿತ್ರರಂಗದಲ್ಲಿ ಶಿವಾಜಿರಾಯರಂಥವರು ಎಂದೂ ಕೆಳಗೇ ನಿಲ್ಲಬೇಕಾದ ಪ್ರವೃತ್ತಿಯನ್ನು ಕೇವಲ ಅನುಭವ – ಸ್ನೇಹ ಸಂಪತ್ತಿನ ಬಂಡವಾಳದ ಆಧಾರದ ಮೇಲೇ ಉಲ್ಲಂಘಿಸಿ ಮೇಲೆ ಬಂದವರು.

ಇವರ ಜೊತೆಗೆ ನನ್ನದೂ ನಿನ್ನ ಮಾತೇ ಎಂದು ಹತ್ತಿರಾದವರು ಮನ್ಮಥರಾವ್. ಜೊತೆಗೆ ಇನ್ನಿಬ್ಬರು ಸಂಗಡಿಗರು. ಆರಂಭದಿಂದ ಈ ಜನದ ಸ್ನೇಹ - ಶ್ರದ್ಧೆ - ಉತ್ಸಾಹ ಕಂಡು ಮೆಚ್ಚಿಕೊಂಡಿದ್ದ ಪ್ರಕಾಶ್ ಅವರು ಸುಲಭದಲ್ಲಿ ಛಾಯಾಗ್ರಹಣಕ್ಕೆ ಒಪ್ಪಿಬಿಟ್ಟರು. ಈ ಮಂದಿ ಅಲ್ಲಿಗೇ ಅವರಿಗೆ ಸುಲಭವಾಗಿ ಬಿಡಲಿಲ್ಲ! ನೀವು ಚಿತ್ರ ನಿರ್ದೇಶಿಸಲೂ ಬೇಕೆಂದರೂ ಹೀಗೇ ಎರಡೆರಡೂ ಹೊಣೆಯನ್ನು ಹೊತ್ತು ದುಡಿಯಲು ಆ ತಂಡದೊಂದಿಗೆ ಉತ್ಸಾಹದ ಜೊತೆಗೆ ನಿಧಾನ - ಶ್ರದ್ಧೆ - ಆಲೋಚನೆ - ಶಿಸ್ತೂ ಎಲ್ಲವೂ ಇರುವ ಪ್ರಕಾಶ್ ಸೇರಿದ್ದು ಹಾಲು ಜೊತೆಗೆ ಜೇನು ಸೇರಿದಂತಾಗಿದೆ. ಹಲವು ಚಿತ್ರಗಳಿಗೆ ಸಹಾಯಕನಾಗಿ ಕೆಲಸ ಮಾಡಿರುವ ಸೋಮ ಒಂದು ಕತೆ ಸಿದ್ಧ ಮಾಡಿದರು. ಜನಪದ ಅಂಶಗಳು ಭಕ್ತಿ-ಸೇಡು-ಪ್ರೇಮ ಇತ್ಯಾದಿ ಇತ್ಯಾದಿ ಇರುವ ಫ್ಯಾಂಟಸಿ ವಾಸ್ತವಗಳ ನಡುವೆ ನಿಲ್ಲಬಹುದಾದ ಕತೆ. ವಿಭಿನ್ನ ಬಗೆಯ ಪ್ರೇಕ್ಷಕನನ್ನು ಅವನವನ ಆಲೋಚನೆಯ ಸ್ತರಕ್ಕೆ ಹಾಗೇ ಹೀಗೆ ಪ್ರಿಯವಾಗಬಹುದಾದ ಅಂಶಗಳನ್ನೊಳಗೊಂಡಂತೆ ಹೆಣೆದ ಕತೆಯಿದು. ಕೇಳಿದಾಗ ಎಲ್ಲೋ ನಾಗಿನ್, ನೀಯಾ! ಕತೆಗಳ ನೆನಪಾದರೂ – ಪೂರ್ಣವಾಗಿ ಅದೇ ಅಲ್ಲ ಎಂಬುದೂ ಹೌದು.

ಈ ಉತ್ಸಾಹಿಗಳ ಕೋರಿಕೆಗೆ ಒಲ್ಲೆನ್ನದೆ ಎಲ್ಲ ವಿಧದಲ್ಲೂ ನೆರವಾಗಿ ತಂತ್ರಜ್ಞರೂ ಕಲಾವಿದರೂ ಬಲ ಪೆಟ್ಟಿಸಿದ್ದಾರೆ. ಮುಖ್ಯವಾಗಿ ವಿತರಕ ವೀರಾಸ್ವಾಮಿಯವರು ಇವರಿಗೆ ಪ್ರೋತ್ಸಾಹಿಸಿದರು, ಎಳೆತನದಿಂದ ಕಷ್ಟ ನಿಷ್ಠುರಗಳನ್ನುಂಡು, ನೋವು-ಅಪಮಾನಗಳನ್ನು ಸಹಿಸಿ ಸ್ವಪ್ರಯತ್ನದಿಂದಲೇ ಗಣ್ಯನಾಗಿ ಬೆಳೆದ ವ್ಯಕ್ತಿ ವೀರಾಸ್ವಾಮಿ. ಆಳಾಗಿದ್ದವನು ಅರಸಾಗುವ ಸ್ಥಿತಿ. ಆದರೆ ಅರಸು ಬಂದ ಅರಸೊತ್ತಿಗೆಯ ಹಿಂದೆ ಉಂಡ ನೋವಿನ ನೆನಪು ಮಾತದು – ಅದ್ದರಿಂದಲೇ ನೋವಿನ-ಹಾದಿಯಲ್ಲಿರುವ ಇತರರಿಗೆ ಬೇಗ ಲಿಫ್ಟ್ ಕೊಡಲು ವೀರಾಸ್ವಾಮಿಯವರಿಗೆ ಭಾರೀ ಖುಷಿ. ಅಂತೆಯೇ ಈ ಉತ್ಸಾಹ ಮಾತ್ರ ಬಂಡವಾಳವಾಗಿದ್ದ ಜನಕ್ಕೆ ಉತ್ಸಾಹದ ಹಿಂದೆ ಇರುವ ಮಾಧ್ಯಮದ ಬಿಗು-ಲಗುವನ್ನು ಬಲ್ಲವರೆಂಬ ಕಾರಣಕ್ಕೇ ಇಲ್ಲವಾಗಿದ್ದ ಆರ್ಥಿಕ ನೆರವು ಇನ್ನೂ ವ್ಯವಹಾರ ಕುಶಲತೆ ಕಲಿಸಿ ಹಬ್ಬಿಕೊಳ್ಳುತ್ತಿರುವ ಬಳ್ಳಿಗೆ ಮಾಮರದ ಆಸರೆಯಂತೆ ನಿಂತರು. ಬಳ್ಳಿಗಳು ಬೇಗ ಬೇಗ ಹಬ್ಬುವ – ವಿಕಸಿಸುವ ಲಕ್ಷಣಗಳು ಕಾಣುತ್ತಿವೆ. ಈ ಬಳ್ಳಿಗಳೆಲ್ಲವೂ ಮಲ್ಲಿಗೆಯ ಕಂಪೇ ಹರಿಸುತ್ತವೆಂಬುದರಲ್ಲಿ ಖಚಿತತೆಯಿಲ್ಲವಾದರೂ ಅವು ಲಾಂಟಾನಾಗಳಲ್ಲ ಎಂಬುದಂತೂ ಸತ್ಯ. ಉದ್ಯಮದ ಆರ್ಥಿಕ ನಿಲುವಿಗೆ ಈ ಜನರ ಸೇವೆ ಪೂರಕವಾದೀತು – ಇದರ ಫಲದಿಂದ ಸಮೂಹ ಮಾಧ್ಯಮದ ಅರ್ಥಪೂರ್ಣ ಬಳಕೆ ಬೌದ್ಧಿಕ ಬೆಳವಣಿಗೆ ಕಲಾತ್ಮಕ ನಿಲುವು ಇತ್ಯಾದಿಗಳು ತಕ್ಷಣಕ್ಕೆ ಅನುಮಾನದ ಮಾತು. ಇವೆಲ್ಲವು ಅವನವನ ನಂಬಿಕೆ, ಒಲವು, ಸಿದ್ಧಾಂತಗಳನ್ನವಲಂಬಿಸುತ್ತವಾದ್ದರಿಂದ ಈ ಕ್ಷಣಕ್ಕೆ ಈ ಮಂದಿ ಉದ್ದಿಮೆಯಲ್ಲಿ ಬೇರೂರಲು – ಮಾಧ್ಯಮದ ಮೂಲಕ ಕೊಂಚಮಟ್ಟಿಗೆ ಆರ್ಥಿಕ ನಿಲುಗಡೆ ಸಾಧಿಸಲು ಮಾತ್ರ ಹೊರಟವರು. ಉಳಿದೆಲ್ಲ ಈ ಕ್ಷಣಕ್ಕಂತೂ ಗೌಣ.

ಉಡುಪಿಯಲ್ಲಿಯ ಚಿತ್ರೀಕರಣಕ್ಕೆ ಪತ್ರಕರ್ತರನ್ನೆಲ್ಲ ಕಟ್ಟಿ ಎಳೆದೊಯ್ದ ಸಾಹಸಿಗರು. ಬಹಳ ದಿನದ ಮೇಲೆ ಎಲ್ಲ ಪತ್ರಿಕಾ ಪ್ರತಿನಿಧಿಗಳೂ ಮೇಳೈಸಿದ್ದು ವಿಶೇಷವೇ. ಉಡುಪಿಯಲ್ಲಿ ನಮ್ಮೊಂದಿಗೆ ಬೆರೆತ ಉದಯವಾಣಿಯ ಗಣಪತಿ ಭಟ್ಟರದಂತೂ ಹಬ್ಬದ ಸಡಗರ. ಎಲ್ಲಿ ಕರೆದೊಯ್ಯಲಿ, ಎಲ್ಲಿ ತಿನ್ನಿಸಲಿ, ಹೇಗೆ ಉಪಚರಿಸಲಿ ಎಂಬ ಅವರ ಸಹೋದ್ಯೋಗಿಗಳ ಬಗೆಗಿನ ಕಾಳಜಿಗೆ ಹೊಂದಿಕೊಂಡಂತೆ ಚಿತ್ರ ತಂಡದವರ ಬಿಗಿಯಾಗದ ಔದಾರ್ಯ ಬೇರೆ. ಪತ್ರಿಕೆಯ ಜನ ಇಷ್ಟಕ್ಕೆ ಇಷ್ಟು ಎಂಬ



"ಗರುಡರೇಖೆ" ಚಿತ್ರದಲ್ಲಿ ಮಾಧವಿ

ಗುಣಾಕಾರ ಹಾಕಿ ಪ್ರಚಾರದ ಗುರಿಯನ್ನೇ ಇಟ್ಟು ಲೆಕ್ಕದ ಮಾತಾಡಿದ ಜನವಲ್ಲ. "ನೀವೆಲ್ಲ ನಮ್ಮ ಸ್ನೇಹಿತರು – ನಮ್ಮದೇ ಬಳಗ; ನಮ್ಮ ಪ್ರಯತ್ನ ನೀವು ನೋಡಬೇಕು. ನಿಮಗೆ ಅತಿಥೇಯರಾಗುವ ಸೌಭಾಗ್ಯ ಹಕ್ಕಿದೆ – ನೀವು ಕಾಣಬೇಕು" ಎಂಬ ತೀರಾ ಸರಳ ನಡೆ. ಅಡಿ ಇಟ್ಟಲ್ಲಿ ಪ್ರೀತಿಯ ಮಾತು. ಸ್ನೇಹ-ವಿಶ್ವಾಸದ ಪೂರದಲ್ಲಿ ಮುಡಿಯೇರಿದ ಮಲ್ಲಿಗೆಯ ಹಾಗೆ ನಾವೂ ಬೀಗಿದ್ದರೆ ಅಚ್ಚರಿಯಿಲ್ಲ.

ಕಳೆದ ಎರಡು ದಿನಗಳು – ಮಲ್ಪೆಯ ತೀರದಲ್ಲಿಯ ಸುತ್ತಾಟ, ಸಮುದ್ರದಲ್ಲಿ ನಿಂತು ವಿಶ್ವವೆಲ್ಲ ಬೇರೆ, ನಾನು-ನನ್ನೆದುರಿರುವ ಸಮುದ್ರ ಮಾತ್ರ ಸತ್ಯ ಎಂಬಂತೆ ಬಹುಕಾಲ ಕೂತು ಏನೋ ನೆನಪುಗಳು ಗರಿಗೆದರಿ ಸಿಹಿ-ಕಹಿ ಅನುಭವ ತಂದದ್ದು. ವ್ವಾಸವಕ್ಕಿಳಿದಾಗ ಇವೆಲ್ಲ ಅನುಭವಕ್ಕೆ ಕಾರಣವಾದ ಚಿತ್ರ ತಂಡ ಕುರಿತು ಋಣೀಭಾವ ಮೂಡಿದ್ದು ಹೇಳುತ್ತ ಹೋದರೆ ಕೇವಲ ಶಬ್ದಾಡಂಬರವಾದೀತೇನೋ!

ಅಂಬಿಕಾ, ಕೆ. ವಿಜಯ ಭಾಗವಹಿಸಿದ್ದರು. ಹುಡುಗಿಯರು ಎಲ್ಲ ತಾರೆಯರ ಹಾಗೆ ಹರಟಲಿಲ್ಲ. ಹತ್ತಿರ ಸುಳಿಯಲೂ ಇಲ್ಲ. ಪತ್ರಕರ್ತರೇನು ಹುಲಿ-ಕರಡಿಗಳೇ ಅಂದಾಗಲೂ ವಿಜಯ ಮುಗುಳ್ನಕ್ಕರಾಗಲೀ ಹೆಚ್ಚು ಮಾತಿಲ್ಲ. ಅಲ್ಲೇ ಸುಳಿದಾಡುತ್ತಿದ್ದ ರೋಹಿತ್ ತನ್ನ ಮುದ್ದಾದ – ಏನೋ ಕತೆ ಹೇಳುವಂಥ ಅಗಲವಾದ ಕಣ್ಣುಗಳಿಂದ ಪ್ರತಿ ನಿಮಿಷವೂ ಆಕರ್ಷಿಸುತ್ತಿದ್ದ. ಮುದ್ದಾದ ಮುಖ, ಪ್ರತಿಭೆಇದ್ದೂ ಈ ಮಕ್ಕಳು ಹೆಚ್ಚು ಪ್ರಚಾರಕ್ಕೆ ಬರೋಲ್ಲ, ಸಿಗುವ ಅವಕಾಶಗಳೂ ಇರುವುದಿಲ್ಲ ಅನ್ನಿಸಿತ್ತು. ಇಂಥಲ್ಲೇ ಒಲ್ಲೆವೆಂದರೂ ವಿಧಿ-ಅದೃಷ್ಟಗಳ ಮಾತಿಗೆ ಮನುಷ್ಯ ಸೋಲುತ್ತಾನೇನೊ!

ಆದಿಯಿಂದ ನೆರವಾಗಿ – ಧೈರ್ಯ ತುಂಬಿದ ಈ ದಂಪತಿಗಳ ಮೇಲೆ ಅಪಾರ ಪ್ರೇಮ ಎಂದಿತು ನಿರ್ಮಾಪಕರ ತಂಡ – ಅದಕ್ಕೆಂದೇ ಚಿತ್ರವನ್ನು ಗೀತಾ ಶ್ರೀನಾಥ ಹೆಸರಲ್ಲಿ ಅರ್ಪಿಸುತ್ತಿದೆ ಜನತೆಗೆ. ಆ ಪ್ರೀತಿಗೆ ನಾವಿಷ್ಟೇ ಕಾಣಿಕೆ ಕೊಡಬಲ್ಲೆವು ಎಂದರು ಮನ್ಮಥರಾವ್.

ನೋಡಿ ಮನ್ಮಥರಾವ್ ನನ್ನನ್ನು ಜನಕ್ಕೆ ಪ್ರಿಯವಾಗುವ ಹಾಗೆ ತೋರಿಸಿದ್ದಾನೆ – ಎಡೆಬಿಡದೆ ಸಹಕರಿಸಿ ಮಾರ್ಗದರ್ಶನ ಮಾಡಿದ್ದಾನೆ. ನಾನು-ಅವನು ಒಂದೇ; ಅವನಿಗಲ್ಲದೆ ಇನ್ನಾರಿಗೆ ಸಹಕಾರ ಹೇಳಿ ಎಂದು ಭಾವುಕತೆಯಿಂದ ನುಡಿದ ಶ್ರೀನಾಥ್‌ರನ್ನು ಅಲ್ಲಿ ನಿಮ್ಮ 'ಪ್ರಣಯರಾಜ' ಬಿರುದಿಗೂ ಈ 'ಮನ್ಮಥರಾವ್'ಗೂ ಏನಾದರೂ ಸಂಬಂಧ ಉಂಟೋ ಅಂತ ಕೇಳಿದೆ ಸನ್ನಿವೇಶ ಕೊಂಚ ಲಘುವಾಗಲೆಂದಾಶಿಸಿ. ಹಾಗಾಗದಿದ್ದರೆ ಅವರೆಲ್ಲ ಭಾವಾವೇಶದಿಂದ ಕಣ್ಣೀರು ಕರೆಯುವುದು ಸಾಧ್ಯವಿತ್ತು. ಕೂಡಲೇ ಶ್ರೀನಾಥ್... ಅಯ್ಯಯ್ಯೋ ಸಂಬಂಧ ಇಲ್ರೀ – ಈ ಮನ್ಮಥ ಇದ್ದಾನಲ್ಲ ಅಂಥಾದ್ದಕ್ಕೆಲ್ಲ ನನ್ನ ಬಿಡೋಲ್ಲ. ಗೀತಾನಾದ್ರೂ ಸುಮ್ಮನಿರ್ತಾಳೆ? ಇವ ಕೆಂಗಣ್ಣು ಬಿಟ್ಟು ಬಿಡ್ತಾನೆ. ಬಹಳ ಕಷ್ಟ – ಒಂದು ತಮಾಷೆ... ಒಂದು ಜೋಕ್ ಮಾಡೋ ಹಾಗಿಲ್ಲ ಲಘುವಾಗಿ ಅಂತ ಮನ್ಮಥರಾವ್ ಅನ್ನು ಚುಡಾಯಿಸಿ ನಗಿಸಿದರು.

ಶಿವಾಜಿರಾವ್ ಇತ್ತೀಚೆಗಷ್ಟೇ ತೀರಾ ಅನಾರೋಗ್ಯದಿಂದ ನರಳಿದರು. ಭಾರೀ ಅಪರೇಷನ್ ಆಗಿತ್ತು. ಆಸ್ಪತ್ರೇಲಿ ಶ್ರೀನಾಥ್ ಒಟ್ಟಿಗೇ ಹೋಗಿ ನೋಡಿದ್ದೆ. ಅಂದು ಕಂಡ ಶಿವಾಜಿ ಇಂದು ಕಾಣಲಿಲ್ಲ – ಉತ್ಸಾಹ-ಪ್ರೀತಿ ತುಂಬಿಕೊಂಡು ಎಲ್ಲರ 'ದಾದಾ' ಆಗಿದ್ದರು. ನಿಜವಾದ ದಾದಾ ಈತ – ನಾವು ಈಗ ಹೇಳುವ 'ದಾದಾಗಿರಿ'ಯ ಗಂಧ ಗೊತ್ತಿಲ್ಲದವನು. ಮುಗ್ಧವಾಗಿ – ಕುಹಕವಿಲ್ಲದ ತಿಳಿಯದ ಮಾತು ವಿನಯವೊಂದೇ ಗೊತ್ತು – ಹಿಂದಿನದೇನಾದರೂ ಪ್ರಸಂಗ ಎತ್ತಿದಾಗ ಯಾರ ಬಗ್ಗೆಯೂ ಏನು ಹೇಳದೆ ನಿವಾರಿಸಿಬಿಡುವ ಪ್ರವೃತ್ತಿ ದ್ವಾರಕೀಶರ ವಿಚಾರ ಎತ್ತಿ ಕೊಂಚ ಕೆಂಡ ಕೆದರಲೆತ್ನಿಸಿದ್ದೆ – ಫಲವಾಗಲಿಲ್ಲ. ಕೆಂಡದ ಮೇಲೆ ಶಿವಾಜಿ ತುಂಬಾ ದಪ್ಪವಾದ ಬೂದಿಯ ಹೊದಿಕೆ ಹಾಕಿಬಿಟ್ಟಿದ್ದಾರೆ. ಅಪರೂಪ ಇಂಥ ಜನ ಚಿತ್ರರಂಗದಲ್ಲಿ...



ರಿಪೋರ್ಟರ್ : ವರ್ಣಶ್ರೀ, ರೋಹಿತ್

ಪಾರ್ಟಿಯಲ್ಲೂ ಹುಡುಗಿಯರು ಬೆರೆಯಲಿಲ್ಲ... ಶ್ರೀನಾಥರೊಂದಿಗೊಂದಿಷ್ಟು ಹರಟೆ – ಚಿತ್ರರಂಗದ ಆಗುಹೋಗು ಕುರಿತು ಮಾತು. ಇದೇ ಧಾಟಿ – ಇದೇ ಕ್ರಮ ಬಳಸಿಯೂ ಕಥೆಗೊಂದು ಹೊಸ ತಿರುವು ಕೊಡಲಾಗದೇ ಅಂದಾಗ ಅವರವರದೇ ಆದ ರೀತಿಯ ಉತ್ತರಗಳು ಕಥೆ ವಿವರಿಸಿದ ಸೋಮು ಅವರು ನೀವು ಹೇಳಿ ದೇವರನ್ನು ಯಾರೂ ನಂಬೋಲ್ಲ – ಹಾವು ದೇವರಲ್ಲವೇ ಎಂದಾಗ ನಾನು - ಗಂಗಾಧರ ಮೊದಲಿಯಾರ್ ಮಾತ್ರ ಕೈಎತ್ತಿದ್ದೆವು! ಕೆಲವರಿಗೆ ಕೇಳಿಸಿರಲಿಲ್ಲ. ಕೆಲವರು ನಂಬುವ ಮಂದಿ – ಹೀಗೆ ಯಾವುದೇ ವಿಚಾರದಲ್ಲಿ ಖಚಿತವಿಲ್ಲದಾಗ ಅದನ್ನು ಸರಿ ಎಂದು ಪ್ರತಿಪಾದಿಸುವ ಪ್ರಯತ್ನವೇಕೆ ಎಂಬುದೇ ವಿಷಯವಾಗಿತ್ತು ಚರ್ಚೆಗೆ. ತಯಾರಿಸುವವನ ನಂಬಿಕೆಯೂ ಬೇರೆಯಿತ್ತಲ್ಲ...! ಇಷ್ಟೆಲ್ಲ ಹೇಳುವ ನೀವು ಇಲ್ಲೊಂದು ಹಾವು ಬಂದರೆ ಸಾಯಿಸದೇ ಇರುವಿರಾ? ಎಂದರೆ ಮತ್ತೊಂದೇ ಕತೆಗೆ ಶುರು – ಆರಂಭದಲ್ಲಿ ಹಾವು ಬಂದಿತ್ತು – ಹಾಗಾಯಿತು ಹೀಗಾಯಿತು. ದಂತಕತೆಯ ಹಾಗೆ ಪುರಾಣದ ಹಾಗೆ... ಇವರನ್ನು ಯಾವ ಸ್ತರದಲ್ಲೂ ಬೇರೆಯ ಯೋಚನೆಗೆ ತಳ್ಳಲಾರೆವು ಅಂದುಕೊಂಡೆವು.

ಅಲ್ಲೇ ಇದ್ದ ಬಿ.ಎಂ.ಕೆ. ಅವರು ನಿಮಗೆಲ್ಲೋ ಭ್ರಮೆ; ಅಲ್ಲ ಎಷ್ಟೋ ವರ್ಷದ ಹಿಂದೆ ಬಂದ 'ಪರಮಾನಂದಯ್ಯ...' 'ಗುರು-ಶಿಷ್ಯರು' ಆದರೆ ಹಿಟ್ ಆಗುತ್ತೆ – ಪವಾಡ - ಪುಣ್ಯಕತೆ - ಪೌರಾಣಿಕಗಳು ನಿಲ್ಲುತ್ತವೆ – ಹೀಗಿರುವಾಗ ನಿಮಗೆ ತಪ್ಪು ತಯಾರಕರಲ್ಲಿ ಹೇಗೆ ಕಾಣುತ್ತೆ – ನಮ್ಮ ಪ್ರೇಕ್ಷಕನೇ ಬೆಳೆದಿಲ್ಲ ಅಂದುಬಿಟ್ಟರು. ಇಲ್ಲಿ ಕೊಂಚ ವಾದಭೂಮಿ ಬೇರೆಯಾಯಿತು. ಏನೇ ಆದರೂ ಅದನ್ನೇ ಕೊಡುತ್ತಿದ್ದರೆ ಅವನೇನು ಮಾಡಿಯಾನು? ಪರಮಾನ್ನದ ರುಚಿಯೇ ತಿಳಿಯದವನು ಗಂಜಿಗೆ ಬೆಲ್ಲ ನಂಚಿಕೊಂಡು ಅದೇ ಪರಮಾನ್ನ ಅಂದುಕೋತಾನೆ ಎಂಬಲ್ಲಿಗೆ ಬಂದೆವು.

ಏ... ಇಲ್ ನೋಡ್ರೀ 'ಪಾಯಸ' ಅನ್ನುತ್ತ ದಿನೇಶ್ ಹಾಜರ್ – ಅವರ ಬೀರ್ ಬಾಟಲಿಯ ಪಾಯಸದ ಗದ್ದಲದಲ್ಲಿ ನಿಮ್ಮ ತರ್ಕ - ಗದ್ದಲ ಎಲ್ಲಕ್ಕೂ ವಿರಾಮ – ಈಗೆಲ್ಲ ಕಿವಿಗೆ ಕೇಳುವ ಕೆಲಸ ಬಾಯಿಗೆ ನಗುವ ಕೆಲಸ ಮಾತ್ರ. ದಿನೇಶ್ ಮಂತ್ರವಾದಿಯ ಹಾಗೆ ಮಾತಿನಲ್ಲೇ ಮೋಡಿ ಹಾಕುತ್ತಾರೆ. ವಿಚಿತ್ರವಾದ ಅನುಭವಗಳನ್ನ ಅನೇಕ ಸಂದರ್ಭದಲ್ಲಿ ಗಂಭೀರವಾದ್ದನ್ನೂ ಹಾಸ್ಯದ ರೂಪದಲ್ಲಿ ಸುಂದರವಾಗಿ ಹೇಳಿಬಿಡುತ್ತಾರೆ. ಹೇಳುವ ಕೇಳುವ ಕ್ರಿಯೆಯಲ್ಲಿ ಎಲ್ಲವೂ ಸುಲಭ – ಆದರೆ ಹೇಳುವಾತ ಅವನ್ನು ಅನುಭವಿಸಿದ್ದಿರಬಹುದಾದ ಸಮಯದಲ್ಲಿ ಅತನಿಗೆ ಆಗಿರಬಹುದಾದ ನೋವು-ಅಪಮಾನ-ಅಸಡ್ಡೆಗಳು ಸಣ್ಣ ಪ್ರಮಾಣದ್ದಲ್ಲ.

ನಾಯಿ, ಕತ್ತೆ, ಎತ್ತು, ಕೋತಿ ಮುಂತಾದವು ಮನುಷ್ಯನಿಗೆ ತಮ್ಮ ತಮ್ಮ ಆಯಸ್ಸನ್ನು ಕೊಡುವುದರ ಕತೆಯೊಂದನ್ನು ದಿನೇಶ್ ಹೇಳಿದಾಗ ಮೇಲ್ನೋಟಕ್ಕೆ ನಾವೆಲ್ಲ ನಗುತ್ತಿದ್ದೆವು. ಆದರೆ ಎಲ್ಲರೂ ಒಳಗೊಳಗೇ ನಾವೀಗ ಯಾರ ಆಯಸ್ಸನ್ನು ಹಾಕಿಕೊಂಡು ಬದುಕುತ್ತಿದ್ದೇವೆ – ಈಗೆಂಥ ಹಂತ ಅಂತ ಯೋಚಿಸದಿರಲಿಲ್ಲ. ಅಧ್ಯಾತ್ಮದ – ಅಪರೂಪವಾದ ಸಾರವೇ ತುಂಬಿದ್ದ ಕತೆಯದು. ಬದುಕಿನ ವಿವಿಧ ಮಜಲುಗಳು ಮಾನವನನ್ನು ಬಾಳಿನಲ್ಲಿ ಹಾದು ಹೋಗುವ ಆಗಿನ ಆತನ ಮನಃಸ್ಥಿತಿ ಜವಾಬ್ದಾರಿಗಳು ಮಹತ್ವದ ಬಹಳ ಸರಳವಾಗಿ ಹೇಳಿದ ಕತೆಯಾಗಿತ್ತದು. ಇವೆಲ್ಲವನ್ನೂ ಹೇಳುತ್ತ ನಗುತ್ತಾ-ನಗಿಸುತ್ತಾ ಇರುವ ದಿನೇಶ್ ಬದುಕಿನಲ್ಲಿ ಎಷ್ಟು ಸುಖಿ? ಆತನಿಗೆ ಸಲ್ಲಬೇಕಾದ ನ್ಯಾಯ ಸಂದಿದೆಯೇ ಎಂದರೆ

**(62ನೇ ಪುಟಕ್ಕೆ)**



# ಕುಳ್ಳ ಬಾಕ್ಸ್ ಆಫೀಸಿನ ಗಟ್ಟಿ ಕುಳ

ವಿಶೇಷ ಸಂದರ್ಶನ:

ಎ. ಎಸ್. ಮೂರ್ತಿ

**ವ್ಯ**ಕ್ತಿಪೂಜೆಗೆ ತುಂಬ ಮಹತ್ವವಿದ್ದಾಗ – ಹೊಸ ಪ್ರತಿಭೆಗಳು ಮಿನುಗುವುದೂ ಕಷ್ಟ. ಇಂಥ ವಿಚಿತ್ರ ಸನ್ನಿವೇಶದಲ್ಲೂ ಕನ್ನಡದ ಜನಕ್ಕೆ ಮೋಡಿ ಮಾಡಿ ಜನ ಪ್ರಿಯತೆಯನ್ನು ಗಿಟ್ಟಿಸಿಕೊಂಡ ಚಾಣಾಕ್ಷ ಕುಳ್ಳ ದ್ವಾರಕೀಶ್.

ದ್ವಾರಕೀಶ್ ಅಭಿನಯ ಮೆಚ್ಚುವವರು – ಮೆಚ್ಚ ದಿರುವವರೂ ಅವರನ್ನಂತೂ ಬಲ್ಲರು. ಅವರ ಆಕಾರದ ಕುರಿತ ಪ್ರಶ್ನೆಯಿಂದಲೇ ಸಂದರ್ಶನ ಪ್ರಾರಂಭ.

ಪ್ರಶ್ನೆ : ನಿಮ್ಮ ಜನಪ್ರಿಯತೆಗೆ ನಿಮ್ಮ ಪರ್ಸನಾಲಿಟಿ ಎಷ್ಟರ ಮಟ್ಟಿಗೆ ಕಾರಣ?

ದ್ವಾರಕೀಶ್ : ಎಲ್ಲರಿಗೂ ತಿಳಿದಂತೆ ನಂದು ವಂಡರ್ ಫುಲ್ ಪರ್ಸನಾಲಿಟಿ ಏನಲ್ಲ. ಹೇಳಿಕೇಳಿ ನಾನು ಕುಳ್ಳ. ಕುಳ್ಳ ಅಷ್ಟೇ ಅಲ್ಲ ಜನರ ಮನಸ್ಸನ್ನ ಕದ್ದಿರೋ ಕಳ್ಳನೂ ಹೌದು. ಅವರಿವರನ್ನ ಯಾಕೆ ಗೇಲಿ ಮಾಡಬೇಕು ಅಂತ ನನ್ನ ಕಣ್ಣು, ನನ್ನ ಮೂಗು, ನನ್ನ ಪರ್ಸನಾಲಿಟೀನ ನಾನೇ ಅನೇಕ ಚಿತ್ರಗಳಲ್ಲಿ ಲೇವಡಿ ಮಾಡಿಕೊಂಡಿದೀನಿ. ಜನಕ್ಕೆ ನಾನು ಬೇಕಾದ್ರೆ ನಾನು ಇರೋ ಹಾಗೆ ಒಪ್ಕೋಬೇಕು. ಜನದ್ದೇನು ತಪ್ಪಿಲ್ಲ. ಅವರು ಯಾರನ್ನಾದ್ರೂ ಒಪ್ಕೋ ತಾರೆ. ಆದರೆ ಮೇಲಿಂದ ಮೇಲೆ ತೆರೆಮೇಲೆ ಆ ಮುಖ ಗಳನ್ನು ಕಂಡು ಪಳಗಬೇಕಷ್ಟೆ.

ಪ್ರಶ್ನೆ : ತುಂಬ ಗಂಭೀರವಾಗಿಯೂ ನೀವು ಅಭಿ ನಯಿಸಬಲ್ಲಿರಿ. ಆದ್ರೂ ತೀರಾ ಓವರ್ ಆಕ್ಟ್ ಮಾಡುವ ಉದ್ದೇಶವೇನು?

ದ್ವಾರಕೀಶ್ : ಚಿತ್ರಗಳು ಎ, ಬಿ, ಸಿ, ಸೆಂಟರ್‌ನಲ್ಲಿ ಓಡಬೇಕು ನೋಡಿ. ಅಲ್ಲಿ ಎಲ್ಲ ಬಗೆಯ ಜನ ಬರ್ತಾರೆ. ಎಲ್ಲರನ್ನೂ ಮೆಚ್ಚಿಸಬೇಕು ಅಂದ್ರೆ ಕಷ್ಟ. ತುಂಬ ಗಂಭೀರ ವಾಗಿ ಅಭಿನಯಿಸಿದರೆ ಕೆಲವು ಮಂದಿ ಭೇಷ್ ಅಂತಾರೆ, ಸ್ವಲ್ಪ ಕಪಿಚೇಷ್ಟೆ ಇದ್ದರೆ ಊರೋರೆಲ್ಲ ಭೇಷ್ ಅಂತಾರೆ. ನನ್ನಂಥೋರು ಹಾಕಿದ ಹಣ ಹಿಂದಕ್ಕೆ ತಗೋಬೇಕು ಅಂದ್ರೆ ಓವರ್ ಆ್ಯಕ್ಟ್ ಮಾಡಲೇಬೇಕು.

ಪ್ರಶ್ನೆ : ನನ್ನ ಗುರು ಅಂತ ಹೇಳಿ ಡಾ। ರಾಜ ಕುಮಾರ್ ಅವರ ಹೆಸರನ್ನ – ಚಿತ್ರವನ್ನ ನೆಟ್ ಬನಿ ಯನ್ ಮೇಲೆ ಬಳಸಿದ್ರಿ...

ದ್ವಾರಕೀಶ್ : ಈಗ್ಲೂ ನಾನು ಗುರು ಅಂತ ಒಪ್ಕೊಂಡೆ ಇದೀನಿ. ಹೃದಯ ಬಗೆದು ತೋರಿಸ್ತಾ ಅವರದ್ದೊಂದು ಪ್ರಿಂಟ್ ಕಾಣುತ್ತೆ.

– ಎಂದು ಥಟಕನೆ ಎಗರಿ ಹನುಮಂತ ಹೃದಯ ಬಗೆವವನಂತೆ ಕುಳಿತರು. ಬೇಡಿ, ಇನ್ನೂ ಬಹಳಷ್ಟು ಕೆಲಸ ಆಗಬೇಕು ಚಿತ್ರರಂಗಕ್ಕೆ ತಮ್ಮಿಂದ ಅಂತ ಪ್ರಶ್ನೆ ಮುಂದರಿಸಿದೆ.

ಪ್ರಶ್ನೆ : ಈಚೆಗೆ ಡಾ॥ ರಾಜ್ ಅವರ ಚಿತ್ರಗಳಲ್ಲಿ ನೀವು ಯಾಕೆ ಇಲ್ಲ?

ದ್ವಾರಕೀಶ್: ಅವರು ಅಭಿನಯಿಸಕ್ಕೆ ಕರೆದಿಲ್ಲ – ಅದಕ್ಕೆ ಇಲ್ಲ.

ಪ್ರಶ್ನೆ : ನಿಮ್ಮ ಚಿತ್ರಗಳಲ್ಲಿ ಅವರು ಅಭಿನಯಿಸದೇ ಇರೋದಕ್ಕೂ ನೀವು ಕರೀದೆ ಇರೋದೇ ಕಾರಣ ಇರಬಹುದೆ?

ದ್ವಾರಕೀಶ್ : ಛೆ... ಛೆ... ನಾನು ಈಗ್ಲೂ ರೆಡಿ... ಕರಿಯೋದು ಏನು... ಆ ಆಹ್ವಾನ ಸದಾ ಇರೋದೇ... ಅವರು ಕಾಲ್‌ಷೀಟ್ ಕೊಡ್ತೀನಿ ಅಂದ್ರೆ ನಾಳೆ ಇಂದ್ಲೇ 'ಸ್ಟಾರ್ಟ್' ಅನ್ನೋನು ನಾನು.

ಪ್ರಶ್ನೆ : ನಮ್ಮ ನಗೆನಟರಿಗೆ ಚಾರ್ಲಿನ್ ಚಾಪ್ಲಿನ್ ನಂಥ ನಟರು ಮಾದರಿ ಆಗೋಕೆ ಸಾಧ್ಯವೇ ಇಲ್ಲವೆ?

ದ್ವಾರಕೀಶ್ : ಖಂಡಿತಾ ಸಾಧ್ಯ ; ಹಾಗೆ ಆಗಬೇಕು ಅನ್ನೋದು ನಿಜ. ಆದರೆ ಕನ್ನಡದ ಸಂದರ್ಭದಲ್ಲಿ ಅದು ಕಷ್ಟ ಅನ್ನಿಸತ್ತೆ.

ಪ್ರಶ್ನೆ : ಯಾಕೆ?

ದ್ವಾರಕೀಶ್: ನಮ್ಮ ಜನಕ್ಕೆ 2½ ಘಂಟೆ – 3 ಗಂಟೆ ಚಿತ್ರಗಳಿರಬೇಕು. ಇಲ್ಲಿಯೋರು ಕೊಟ್ಟ ಒಂದೊಂದು ಕಾಸಿಗೂ ತಕ್ಕ ಲಾಭ ಬರಬೇಕು ಅನ್ನೋರು. ಒಂದು ಸಣ್ಣ ಎಳೇಲೇ ಅವರು ಸೊಗಸಾದ ಒಂದು ಚಿತ್ರ ಮಾಡ್ತಾರೆ ಅವರಿಗೆ ಒಟ್ಟು ಕಥೆ ಮತ್ತೂ ಚಿತ್ರ ಮುಖ್ಯ. ಚಿತ್ರದ ಉದ್ದ ಅಲ್ಲ. ಇಲ್ಲಿ ಹಾಗಲ್ಲವಲ್ಲ ಚಿತ್ರದಲ್ಲಿ ಎಲ್ಲ ಮಸಾಲೆ ಇರಬೇಕು. ಅದಿಲ್ಲ ಮ್ಯಾಟ್ನೀಗೆ ಔಟ್ ಆಗಿ ಬಿಡುತ್ವೆ ನಮ್ಮ ಕನ್ನಡ ಚಿತ್ರಗಳು. ಏನು ಮಾಡ್ತೀರಿ?

ಪ್ರಶ್ನೆ : ಆಯಿತು... ನಮ್ಮ ಕನ್ನಡ ಚಿತ್ರಗಳಲ್ಲಿ ಹಾಸ್ಯ ಇರಬೇಕಾದಷ್ಟು ಗಂಭೀರವಾಗಿದೆ ಅನ್ನಿಸುತ್ತಾ?

ದ್ವಾರಕೀಶ್ : ಖಂಡಿತಾ ಇಲ್ಲ. ಏನಪ್ಪಾ ಅಂದ್ರೆ ಮುಂಚೆ ಹೀರೋ-ಹೀರೋಯಿನ್ ಟ್ರ್ಯಾಕ್. ಒಂದಿದ್ರೆ. ಕಾಮೆಡಿ ಪೇರ್‌ದು ಒಂದು ಟ್ರ್ಯಾಕ್ ಇರೋದು ಮೂಲ ಕಥೆಗೆ ಅದು ಸಂಬಂಧ ಇರಲಿ – ಬಿಡಲಿ ಅದು ಇರೋದು ಈಗ ಅದು ತಪ್ಪಿದೆ ಅನ್ನೋದು ಒಂದು ರೀತಿಯ ಸುಧಾರಣೆಯೆ. ಫುಲ್ ಲೆಂಗ್ತ್ ಕಾಮೆಡಿ ತೆಗೆಯಕ್ಕೆ ನನಗೂ ಇಷ್ಟವೇ. ಆದ್ರೆ ಅದು ಅನ್ಕೊಂಡಷ್ಟು ಸುಲಭ ಅಲ್ಲ.

ಪ್ರಶ್ನೆ : ಚಿತ್ರರಂಗಕ್ಕೆ ನೀವು ಕಾಲಿಟ್ಟಾಗ ನಿಮಗೆ ಈಗಿರುವ ಇಮೇಜ್ ಬಂದೀತು ಎಂಬ ಕಲ್ಪನೆ ಇತ್ತೆ?

ದ್ವಾರಕೀಶ್ : ಆ ಥರಾ ಯೋಚನೆ ಕೂಡಾ ಮಾಡೋ ಸ್ಥಿತಿ ಇರಲಿಲ್ಲ ಆಗ. ಸದ್ಯ ನಿಂತ್ಕೊಳ್ಳಕ್ಕೆ ಅವಕಾಶ ವಾದರೆ ಸಾಕು ಅನ್ಕೊಂತಿದ್ದ ದಿನಗಳು ಅವು.

(16ನೇ ಪುಟಕ್ಕೆ)

# ಕಲಾಪ

✣ ವಿಜಯಾ

ಅವರು ಸಿನಿಮಾದಲ್ಲಿ ಅವಕಾಶ ಕೊಡುತ್ತೇವೆಂದರು. ಒಳ್ಳೆಯ ಬ್ಯಾನರ್. ಇಲ್ಲಿ ಕಂಡರೆ ಮುಂದೆ ಹೆಚ್ಚು ಅವಕಾಶ ಸಿಕ್ಕೇ ಸಿಗುತ್ತವೆಂಬ ನಂಬಿಕೆ. ಆಕೆ – ಆಕೆಯಂಥ ಹಲವರು ಒಪ್ಪಿದರು. ಸುಮಾರು ನಲವತ್ತೈದು ದಿನ ಕಡ್ಡಾಯವಾಗಿ ಇರಲೇಬೇಕು ಅಂದರು. ಜೊತೆಗೆ ಯಾರನ್ನಾದರೂ ಕರೆತರುವಂತಿಲ್ಲ ಅಂತಲೂ ಶರತ್ತು. ಇಷ್ಟಾಗಿ ಸಂಭಾವನೆಯ ಕುರಿತು ಯಾವ ಒಪ್ಪಂದ ಪತ್ರವೂ ಇಲ್ಲ!

ಚಿತ್ರರಂಗದಲ್ಲಿ ಅವಕಾಶ – ಅದೂ ಹೆಸರಾದ ಮಂದಿ ಇತ್ತ ಆಹ್ವಾನ; ಗುಂಪು-ಗುಂಪೇ ಹೊರಟಿತ್ತು. ಹೊರಟ ವ್ಯಾನಿನಲ್ಲೇ ಆರಂಭವಾಯಿತು ವಿಚಿತ್ರ ವರ್ತನೆ; ಅದೂ ಚಿಲ್ಲರೆ ನಟ ಹಾಗೂ ಸಹಾಯಕನಿಂದ ಹಿಡಿದು ನಿರ್ವಹಣಾಧಿಕಾರಿಯೂ ಸೇರಿದಂತೆ. ಅಲ್ಲೇ ಬಾಟಲ್ ಒಡೆದರು, ಕುಣಿದರು – ಸನಿಹದ ಸೀಟುಗಳಲ್ಲಿದ್ದ ಹುಡುಗಿಯರನ್ನು ಎಳೆದಾಡಿದರು. ಒಲ್ಲೆನೆಂದವರಿಗೆ ಒಂದಿಷ್ಟು ಅವಾಚ್ಯಾದಿ ಬೈಗುಳವೂ ಆಯಿತು.

ಶೂಟಿಂಗ್ ಆರಂಭ. ಹುಡುಗಿಯರ ಕೆಲಸ ಇರಲೇ ಇಲ್ಲ. 45 ದಿನದಲ್ಲಿ ಒಂದೋ-ಎರಡೋ ದಿನ ಅದೂ ಒಂದೋ ಎರಡೋ ಶಾಟ್‌ಗಳು ಮಾತ್ರ– ಗ್ರೂಪ್‌ನಲ್ಲಿ. ತೀರಾ ಹೊಸಬರಲ್ಲದ – ಒಂದೆರಡು ಚಿತ್ರಗಳಲ್ಲಿ ಅಭಿನಯಿಸಿಯೂ ಇರುವ ಒಬ್ಬಾಕೆಗೆ ಇದು ತೀರಾ ವಿಚಿತ್ರ ಅನ್ನಿಸಿತ್ತು. ಇವರ ಸಲುವಾಗಿ ಆಕೆ ಒಂದೆರಡು ಒಳ್ಳೇ ಅವಕಾಶಗಳನ್ನೂ ಕಳೆದುಕೊಳ್ಳಬೇಕಾಯ್ತು. ಅಲ್ಲಿ ಪಾರ್ಟಿಗಳಾಗುತ್ತಿದ್ದವು. ಹುಡುಗಿಯರಿಗೆ ಮಾತ್ರ ಆಹ್ವಾನ. ಹೋಗದಿದ್ದರೆ ಕೆಟ್ಟ ಬೈಗುಳ. ಹುಡುಗರು ಸುಳಿವಂತಿಲ್ಲ. ಆ ಬಗ್ಗೆ ಮಾತಾಡಿದ ನಟನೊಬ್ಬನ ಬಗ್ಗೆ ಅಪಪ್ರಚಾರವಾಯಿತು. ಮುಖ್ಯ ಪಾತ್ರದಲ್ಲಿರುವ ನಟಿಯೊಬ್ಬರು "ಈ ಪಾರ್ಟಿಗಳಿಗೆ – ನಿಮ್ಮ ಇಚ್ಛೆಗೆ ನಾವು ಸಮ್ಮತಿಸದಿದ್ದರೆ ನಾಯಕಿಯ ಪಾತ್ರ ಕೊಡೋಲ್ಲವೊ" ಎಂದು ಒಟಾರೇ ಕೇಳಿದರಂತೆ – ಈ ಕಾಮಣ್ಣಗಳು 'ಬೆ... ಬೆ...' ಅಂದವು.

ಎಲ್ಲರಿಗೂ ಆ ಧೈರ್ಯ ಇರುಲ್ಲ. ಮತ್ತೆ ಈ ಕಾಮಣ್ಣಗಳಲ್ಲಿ ಒಂದಕ್ಕೆ ಭಾರೀ ಇನ್‌ಪ್ಲುಯೆನ್ಸ್ ಇದೆ. ಕಾಮಣ್ಣ ರಾಜಕೀಯ ವಲಯದಲ್ಲಿಯಂತೂ ಭಾರೀ ಒಳಗೆಲಸದ ವ್ಯಕ್ತಿ – ಮತ್ತೆ ಈ 'ನ್ಯಾಯದೇವರನ್ನ' ದೂರ ಇಟ್ಟು ಎದುರಿಸಿ ಬದುಕುವ 'ಪ್ರಾಯ' ಯಾರಿಗುಂಟು.

ಹೀಗೆ ತೊಂದರೆಗೀಡಾದ 2 – 3 ಹುಡುಗಿಯರನ್ನು ಭೇಟಿಯಾದ ನನಗೆ ಅವರ ಅಸಹಾಯತೆ ಕಂಡು ನಿಜಕ್ಕೂ ಬೇಸರ – ಸಂಕಟ ಆಗಿದೆ. ಪರಿಹಾರ ಬಹಳ ಕಷ್ಟದ್ದು. ಈ ಯಾವ ಹುಡುಗಿಯೂ ತನ್ನ ಹೆಸರನ್ನು ಹೇಳಲಿಷ್ಟಪಡುವುದಿಲ್ಲ. ಹಾಗೆ ಹೇಳುವುದರಿಂದ ಈ ಪ್ರಭಾವೀ ಜನ ತಮ್ಮ ಚಿತ್ರಗಳಲ್ಲಿ ಹಾಗಿರಲಿ ಬೇರೆಯವರ ಚಿತ್ರಗಳ ಅವಕಾಶವನ್ನೂ ತಪ್ಪಿಸಿಬಿಡುತ್ತಾರೆ. ವಿಚಿತ್ರ ಸುದ್ದಿ ಮಾಡುತ್ತಾರೆ.

'ಸಂಜೆ ನಮ್ಮ ಆಫೀಸಿಗೆ ಬನ್ನಿ. ತುಂಬಾ ಮಾತಾಡೋದಿದೆ' ಅಂದ ಕಾಮಣ್ಣ 'ಈ ನಿಮ್ಮ ಗಂಡ ಗಿಂಡ ಯಾರನ್ನೂ ಕರೆತರಬೇಡಿ' ಅಂತ ಕಟ್ಟಿಕೊಂಡ ಗಂಡನೆದುರೇ ತಾಕೀತು ಮಾಡಿದರಂತೆ!

ಹೋದರೆ ಹೇಗೊ... ಹೋಗದಿದ್ದರೂ ತೊಂದರೆಯೊ!! ಗ್ರೂಪ್ ಸೀನ್‌ನಲ್ಲಿ ನಿಲ್ಲಿಸಿ – 45 ದಿನ ಕೊಳೆಸಿ, 2 – 3 ಅವಕಾಶಾನೂ ತಪ್ಪಿಸಿ ಬರುವಾಗ 250 ರೂ. ಕೈಯಲ್ಲಿಟ್ಟ ನಿರ್ಮಾಪಕ ಮಹಾಶಯ ಇದೇನು? ಅಂದ ಗೃಹಿಣಿಗೆ "ನಾನೇನು ಅಗ್ರಿಮೆಂಟ್ ಮಾಡಿದ್ನೆ..." ಅನ್ನುತ್ತ ಬೀಳುತ್ತಿದ್ದ ಕಚ್ಚೆ ಸಿಗಿಸಿಕೊಂಡು ಎಲೆಯಡಿಕೆ ಉಗುಳುತ್ತ ನಡೆದಾಗ ಈ ಪರಮ ಜನೇಶ್ವರಾನುಯಾಯಿಯ ಭಕ್ತಿ – ಧರ್ಮ ನೀತಿಯ ಬಗ್ಗೆ ಹೊಸ ಮಿಂಚೊಂದು ಗೋಚರವಾಯಿತಂತೆ...

ಈ ತಂಡಕ್ಕೆ ಹಾರಿ ಅದ್ಭುತ ಸಾಧಿಸ ಹೊರಟ ಮಕರಂದನಂಥ ಎಳೆಯನು ಹುಡುಗಿಯರ – ಮೆಚ್ಚುವವರ ನಡುವೆ ಮುಗ್ಧವಾಗಿ ಮೈಮರೆತರೂ ಒಳಗೊಳಗೇ ತಾನಿಲ್ಲಿ ಸೂತ್ರದ ಬೊಂಬೆಯಾದೆನೇ ಎಂದು ಕೊರಗುವದನ್ನು ಸೂಕ್ಷ್ಮವಾಗಿ ಗಮನಿಸಿದರೆ ತಿಳಿಯುತ್ತಂತೆ – ಪಾಪದ ಪ್ರಾಣಿಗೆ ಇಂಥ ಗ್ರಹಣ ಹಿಡಿಯಬಾರದಿತ್ತು!

* * *

ಶತ ದಿನೋತ್ಸವದ ದಿನ ಮುಖ್ಯರಿಗೆ ನಟರು ಬಾಜಾ ಬಜಂತ್ರಿ ಸಮೇತ ಸುಖಾಗಮನಕೋರಿದ್ದು ಕಂಡೆವು. ಪ್ರಾಯಶಃ ಮುಂದೆ ಇವರು ಮಹಾನಾಯಕರಾಗಿ ಬಂದರೆ – ಈ ನಟರು ವೃತ್ತಿವಿಹೀನರಾಗಿ ವಾಲಗ ಬಾರಿಸುವವರಾಗಿಬಿಡುವ ಸಂಭವದ ಸಾಂಕೇತಿಕ ಚಿತ್ರಣವೊ!

ಆದರೂ ಪಾಪ ತನ್ನ ಕೈಯಿಂದ ಹೋದ ಡೋಲು ಶಹನಾಯಿ ಇತ್ಯಾದಿ ಬೇರೆಯೋರ ಕೈ-ಬಾಯಲ್ಲಿ ಅಪಸ್ವರ ನುಡಿವುದ ನೋಡುತ್ತ ಪೆಚ್ಚಾದ ವಾಲಗದವನ ಪೆಚ್ಚು ಮುಖ ನೋಡಿದಾಗ ಹೀಗಾದರೆ ನನ್ನ ಪಾಡೇನು? ನಿರುದ್ಯೋಗ ನನ್ನ ಕಾಡಲಿದೆಯೇ – ಮನೇಲಿ ಮರೆತಿಟ್ಟ ಕತ್ತಿಯೊಂದೇ ಆಧಾರವೋ ಅಂದುಕೊಂಡಹಾಗಿತ್ತು.

ಅವನಿಗೆ ಹೇಳಬೇಕನ್ನಿಸ್ತು, ಅಯ್ಯಾ ನಿನ್ನ ಕತ್ತಿ, ಪೆಟ್ಟಿಗೆ ಕೆಲಸ ಇವರಿಗೂ ಗೊತ್ತು – ವಾಲಗಕ್ಕಿಂತ ಚೆನ್ನಾಗಿ ಆ ಆಯುಧ ಬಳಸಬಲ್ಲರು. ಈಗ ಅವರಿರೋ ಕ್ಷೇತ್ರದಲ್ಲಿ ಅದೇ ತಂತ್ರವೇ ಉಳಿವಿಗೆ ಮುಖ್ಯ ಅಂತ ಹೇಳಿದರೆ ಅವ ಮೂರ್ಛೆ ಹೋದಾನೆಂದು...!

* * *

"ಯಾರೋ ಕನ್ನಡ ಸಂಘದೋರಿಗೆ ಪ್ರಾಯಶಃ ಆರಂಭದಿಂದ ಸ್ಟಾರ್ ಕಟ್ಟಿದೋರು ಇತ್ಯಾದಿ ಆಹ್ವಾನ ಹೋಗಿಲ್ಲಂತೆ– ಮುನಿದು ಫೋನಾಯಿಸಿದಾರೆ" ಎಂದರು. ಕಿವಿಯಲ್ಲಿ ಕೇಳಿದ ಮುಖ್ಯರು ಅದಕ್ಕೆ ಪ್ರಾಮುಖ್ಯ ಕೊಡದೆ ತೇಲಿಸಿದರು.

ವಿಷಯ ಸಣ್ಣದಾದರೂ–ಸಭೆಯ ಮೇಲಾದ್ದು ತಲೆಗೊಂದು ಮಾತು ಸುದ್ದಿ... ಆಗಿ ಕೊನೆಗೆ ಎಲ್ಲರೂ ನಂಬಿ ಅಬ್ಬರದಿಂದ ಪತ್ರಿಕೇಲೂ ಸುದ್ದಿ ಮಾಡೋ ಹಾಗೆ 'ಯಾರೋ ಬಾಂಬ್ ಹಾಕ್ತೀವೀಂದ್ರು' ಅಂತ. ಮತ್ತೆ ಹಾಗಂದವರು ರಾಜ್ ಅಭಿಮಾನಿಗಳು ಅಂತ ಹೀಗೇ ಸುದ್ದಿಗಳು ಹುಟ್ಟಿದುವು. ಸೊನ್ನೆಗೆ ಕಣ್ಣು-ಮೂಗು-ಕೈ ಕಾಲು ಸೇರಿಸಿ ಸಡಗರ ಮಾಡಿದ್ದು ಕೇಳಿ ದ್ವಾರಕೀಶ್‌ಗೆ ಸಂಭ್ರಮ ಆಗಿರಬೇಕು. ಇಲ್ಲಿ ಇದೊಂಥರಾ ಪ್ರಚಾರ ಅಂತ 'ಹೌದೂ' ಅಂದರೂ, ಹೇಳಿದೋರು ಕೇಳಿದೋರಿಗಿಂತ ಹೆಚ್ಚಾಗಿ ಬಿಡುಗಣ್ಣಲ್ಲಿ ಮೂಗು ಮೇಲೆತ್ತಿ – ಬಾಯಗಲಿಸಿ 'ಪೆದ್ದ'ನ ಹಾಗೇ ಇದ್ದು ಸುದ್ದಿಯಾದ ಮೇಲೆ – ಸಿಕ್ಕ ಪ್ರಚಾರಕ್ಕೆ ಹಿಗ್ಗಿ 'ಗೆದ್ದ' ಅಂದರು.

ವಿಮರ್ಶೆಗೆ ಮೆಚ್ಚುಕೊಡ್ತೀವೀಂತ ಹೇಳಿ ತಮ್ಮ ಚಿತ್ರಾನ ಹೊಗಳಿರುವ ಸಾಲನ್ನ ಓದಿ ಇದೇ ನಿಜವಾದ ವಿಮರ್ಶೆ ಅಂದು ಶೀಲ್ ಕೊಟ್ಟರು. ಮುಂದೆಲ್ಲ ವಿಮರ್ಶೆ ಶೀಲ್ಡ್‌ಗಾಗಿಯಾದರೂ ಒಳ್ಳೇದೇ ಬರುತ್ತೇನ್ನೋ ಭ್ರಮೆ!!!

●



ಗರುಡರೇಖೆ : ಲೋಕೇಶ್, ಅಂಬಿಕಾ.









White Rose,



Lily Rose



Ever Trim



My Choice



First Choice









4

1 ಸರ್ಪಚುಂಬನ : ಇಂದುಶ್ರೀ, ಕಲ್ಯಾಣ್‌ಕುಮಾರ್
2 ಧರ್ಮ : ಶ್ಯಾಮಲ, ದಿನೇಶ್
3 ಬೂದಿ ಮುಚ್ಚಿದ ಕೆಂಡ : ರೂಪಾ, ಶ್ರೀನಾಥ್
4 ಅರ್ಚನಾ : ಲೋಕೇಶ್, ಆರತಿ
5 ಶಂಕರ್-ಸುಂದರ್ : ಸುಂದರಕೃಷ್ಣ ಅರಸ್, ಲಕ್ಷ್ಮಣ್
6 ಪ್ರಾಯ-ಪ್ರಾಯ-ಪ್ರಾಯ : ಸಿ. ಆರ್. ಸಿಂಹ, ರಾಮಕೃಷ್ಣ
7 ಜೋಡಿ ಜೀವ : ಇಂದಿರಾ, ಶ್ರೀನಿವಾಸಮೂರ್ತಿ



5



6



7

## ಕುಳ್ಳ: ಬಾಕ್ಸಾಫೀಸಿನ ಗಟ್ಟಿ ಕುಳ

(10ನೇ ಪುಟದಿಂದ)

**ಪ್ರಶ್ನೆ :** ನಟರಾದ ನಿಮಗೆ ನಿರ್ಮಾಪಕರಾಗಬೇಕು ಅನಿಸಿದ್ದು ಯಾವಾಗ?

**ದ್ವಾರಕೀಶ್ :** ಎದುರಿಗಿರೋ ಏಣೀಲಿ ಹತ್ತೋಕೆ ಮೆಟ್ಟಿಲುಗಳಿರುವಾಗ – ಒಂದಾಗುತ್ಲೂ ಒಂದು ಹತ್ತಿಕೊಂಡು ಹೋಗೋಣ ಅನ್ನಿಸತ್ತೆ. ಈ ಕುಳ್ಳಂದೂ ಉಪ್ಪು-ಖಾರ ಉಂಡ ದೇಹ ತಾನೆ... 1966ರಲ್ಲಿ 2½ ಸಾವಿರ ರೂ. ಇಟ್ಕೊಂಡು ನಿರ್ಮಾಪಕನಾಗಕ್ಕೆ ಹೊರಟೆ. ನಟ-ನಿರ್ಮಾಪಕ ಅಂತಾದ್ರೆ ಒಂದೇ ಏಟಿಗೆ ಎರಡು ಹೆಸರು. ಸ್ವಲ್ಪ ಹುಶಾರಾಗಿರಲಿಲ್ಲ, ಅದೃಷ್ಟ ಚೆನ್ನಾಗಿಲ್ಲ – ಡ್ರೆಸ್ಸು – ಅಡ್ರೆಸ್ಸು ಎರಡೂ ನಾಪತ್ತೆ ಆಗಿಬಿಡುತ್ತೆ. ಅದರಿಂದ ನಾನು ಸ್ವಲ್ಪ ಲೆಕ್ಕಾಚಾರ!

**ಪ್ರಶ್ನೆ :** ಚಿತ್ರರಂಗಕ್ಕೆ ಕಾಲಿಟ್ಟಾಗ ನಿಮ್ಮದು ಹೊಸ ಮುಖ. ಈಗ ಹೆಸರಾದ ಮುಖ. ಇದೇ ದಿಕ್ಕಿನಲ್ಲಿ ಯೋಚನೆ ಮಾಡಿ ಹೆಚ್ಚು-ಹೆಚ್ಚು ಹೊಸ ಮುಖ ಯಾಕೆ ಬಳಸಲ್ಲ. ಎಲ್ಲ ಏಕ್ದಂ ಸ್ಟಾರ್ಸ್ ಅಂತ್ಲೇ ಹೋಗ್ತಾರಲ್ಲ?

**ದ್ವಾರಕೀಶ್ :** ಚಿತ್ರರಂಗ ಒಂದು ಥರಾ ಕುದುರೇ ಜೂಜು ಇದ್ದಹಾಗೆ. ಗೆಲ್ಲುತ್ತೆ ಅಂತ ಗ್ಯಾರಂಟಿ ಇರೋ ಕುದುರೆ ಮೇಲೆ ಎಲ್ಲ ಹಣ ಕಟ್ತಾರೆ. ಓಡದೆ ಇರೋ ಕುದುರೆ ಬಾಲಕ್ಕೆ ಯಾರು ಕಟ್ತಾರೆ ಹಣ. ಇಲ್ಲೂ ಅಷ್ಟೆ... ಬಾಕ್ಸ್ ಆಫೀಸ್ ತುಂಬೋ ಮುಖಗಳು ಯಾವುವು ಅಂತ್ಲೇ ನೋಡ್ತಿರ್ತಾರೆ.

**ಪ್ರಶ್ನೆ :** ಗೆಲ್ಲೋ ಕುದುರೆಗಳು ಅಂತ ಹಾಕಿಕೊಂಡ ಸ್ಟಾರ್ಸ್ ಚಿತ್ರಗಳೆಲ್ಲ ಗೆದ್ದಿವೆಯಾ ಹಾಗಾದರೆ?

**ದ್ವಾರಕೀಶ್ :** ಅದು ಸ್ವಯಂ ಕೃತಾಪರಾಧವಾದ್ದರಿಂದ, ಏನೋ ಈ ಸರ್ತಿ ಹಾಗಾಯಿತು, ಕಥೆ ಪರಿಣಾಮ ಬೀರಲಿಲ್ಲ, ಚಿತ್ರೀಕರಣ ತೃಪ್ತಿಅನ್ನಿಸಿಲ್ಲ ಅಂತ ಏನೋ ಸುಳ್ಳು ಸಮಾಧಾನ ಮಾಡ್ಕೋತಾರೆ ಮನಸ್ಸಿಗೆ.

**ಪ್ರಶ್ನೆ :** ಹಾಗಾದರೆ ಹೊಸಬರಿಗೆ ಈ ವ್ಯವಸ್ಥೇಲಿ ಅವಕಾಶ ಕಡಿಮೆ ಅನ್ನಿ?

**ದ್ವಾರಕೀಶ್ :** ಈಗ ಸ್ವಲ್ಪ ವಾಸಿ. ಕೆಲವರು ಧೈರ್ಯ ಮಾಡಿ ಹೊಸ ಮುಖ ಬಳಸ್ತಾರೆ. ನಾನೂ ಕೆಲವು ತಂತ್ರಜ್ಞರಿಗೆ ಒಳ್ಳೇ ಅವಕಾಶ ಮಾಡೇ ಇದೀನಿ.

**ಪ್ರಶ್ನೆ :** ಯಾರು ಅಂತ ಹೇಳಬಹುದಲ್ಲ.

**ದ್ವಾರಕೀಶ್ :** ಸಿದ್ದಲಿಂಗಯ್ಯ, ಕೆ. ಎಸ್. ಆರ್. ದಾಸ್, ಭಾರ್ಗವ, ಸಿ. ವಿ. ರಾಜೇಂದ್ರನ್.

**ಪ್ರಶ್ನೆ :** ಒಬ್ಬ ಕನ್ನಡದ ನಿರ್ದೇಶಕ ನಂತರ ಒಬ್ಬ ತಮಿಳು ನಿರ್ದೇಶಕನ ತರಹವೇ ಆಯ್ಕೆ ಮಾಡಿದೀರಲ್ಲ. ಲಾಭ-ನಷ್ಟಗಳನ್ನು ತೂಗಲು ಇದೊಂದು ಲೆಕ್ಕಾಚಾರವೊ ಹ್ಯಾಗೆ?

**ದ್ವಾರಕೀಶ್ :** ಹಾಗೇನಿಲ್ಲ... ಆರ್ಡರ್ ಹಾಗಿದೆ ಅಷ್ಟೆ. ಕಥೆ ನೋಡಿಕೊಂಡು ಅದನ್ನ ಚೆನ್ನಾಗಿ ಹ್ಯಾಂಡ್ಲ್ ಮಾಡಬಲ್ಲ ನಿರ್ದೇಶಕರನ್ನ ಆರಿಸೋದು ನನ್ನ ಜಾಯಮಾನ.

**ಪ್ರಶ್ನೆ :** ಕಳೆದ ವರ್ಷ ಏನನ್ನಿಸಿತು ನಿಮಗೆ?

**ದ್ವಾರಕೀಶ್ :** ಬಂದ ಚಿತ್ರಗಳು ಅದರ ಸೋಲು ಗೆಲುವುಗಳು ಇವೆಲ್ಲ ಕಂಡು ಅಂಗವಿಕಲರ ವರ್ಷದಲ್ಲಿ ಮುಂದೇನು ಅನ್ನೋದು ಕಾಣದಂಥ ಕುರುಡನಾಗಿದೀನಿ.

**ಪ್ರಶ್ನೆ :** ಅಲ್ಲ. ಹಾಸ್ಯನಟನ ಮಾತಿನಲ್ಲಿ ಈ ನೋವಿನ ಧ್ವನಿ ಯಾಕೆ?

**ದ್ವಾರಕೀಶ್ :** ನನ್ನ ಕನ್ನಡ ಚಿತ್ರದ ಬಿಡುಗಡೆಗೆ ಥಿಯೇಟರ್ ಗಲಾಟೆ. ಆ ಮಾತಿಗೆ ಸುಣ್ಣ ಬಣ್ಣ. ಮನೇ ಮೇಲೆ ಕಲ್ಲು ಒಂದು ಥರಾ ಅವಮಾನ ಆದ ಹಾಗೆ ಆಯಿತು. 15 ವರ್ಷದಲ್ಲಿ 15 ಯಶಸ್ವಿ ಚಿತ್ರ ಕೊಟ್ಟಿದೀನಿ – ಒಂದೂ ಫ್ಲಾಪ್ ಅಲ್ಲ... ಆದ್ರೂ ಯಾಕೆ ಹೀಗೆ ಅನ್ನಿಸಿ ಸಿನಿಮಾರಂಗಾನೆ ಬಿಟ್ಟುಬಿಡೋಣ ಅನ್ನಿಸಿದ್ದೂ ಉಂಟು...

**ಪ್ರಶ್ನೆ :** 12 ವಾರ ಕನ್ನಡ ಚಿತ್ರ ಓಡಿಸಲೇಬೇಕು ಅನ್ನೋ ಮಾತಿಗೆ ಏನು ಹೇಳ್ತೀರಿ?

**ದ್ವಾರಕೀಶ್ :** ಸರಿ... ಆದರೆ ಬಲವಂತವಾಗಿ ನಡಸೋ ಸ್ಥಿತಿ ಬಂದರೆ... 1 ಷೋ ಕೂಡಾ ಓಡದೆ ಇರೋ ಅಂಥ ಚಿತ್ರ ಆದರೆ! ?

**ಪ್ರಶ್ನೆ :** ಪರ್ಸಂಟೇಜ್ ವ್ಯವಸ್ಥೆ ಕಡ್ಡಾಯ ಮಾಡಿದರೆ ಹೇಗೆ?

**ದ್ವಾರಕೀಶ್:** ದೊಡ್ಡ ಬಜೆಟ್ ಫಿಲಂಗಳಿಗೆ ತೊಂದರೆ, ಸಣ್ಣ ಬಜೆಟ್ ಚಿತ್ರಗಳಿಗೆ ಅನುಕೂಲ ಆಗಬಹುದು. ಕೇರಳದಲ್ಲಿ ಹ್ಯಾಗೆ ಗೊತ್ತೇನು... 1300 ರೂ. ಕೆಪಾಸಿಟಿ



"ಮಂಕುತಿಮ್ಮ" ಚಿತ್ರದಲ್ಲಿ ದ್ವಾರಕೀಶ್

ಇರುತ್ತೆ. 1000 ರೂ. ಆಗಬೇಕು. ಹೋಲ್ಡ್ ಓವರ್ ಅದು 800 ರೂ. ಆದರೆ ನೆಕ್ಸ್ಟ್ ಷೋ ಬೇರೆ ಪಿಕ್ಚರ್ ತರಿಸಬಿಡತಾರೆ... ಆ ದೃಷ್ಟಿಯಿಂದ ಬಾಡಿಗೆಯೆ ವಾಸಿ ಏನೊ!

**ಪ್ರಶ್ನೆ :** ಕನ್ನಡ ನಾಡಿನಲ್ಲಿ ತಯಾರಾದ ಚಿತ್ರಗಳಿಗೆ 50% ತೆರಿಗೆ ವಿನಾಯಿತಿ ಕೊಡ್ತಿದಾರಲ್ಲ ಏನಂತೀರಿ?

**ದ್ವಾರಕೀಶ್ :** ತುಂಬ ಒಳ್ಳೇದು. ರೀಮೇಕ್ ಚಿತ್ರಗಳಾದಾಗ 50% ಇಲ್ಲ–ಸರಿ; ಆದರೆ ಸಬ್ಸಿಡಿ ಕೊಡ; ಬೇಕು. ಡಬ್ಬಿಂಗ್ ಚಿತ್ರಗಳಿಗೆ ಯಾವ ಸೌಲಭ್ಯವೂ ಇರಬಾರದು.

**ಪ್ರಶ್ನೆ:** ಚಿತ್ರ ನಿರ್ಮಾಪಕರು ತಮ್ಮ ಸಾಮಾಜಿಕ ಜವಾಬ್ದಾರಿ ಅರಿತಿದಾರೆಯೆ? ಅಂಥ ಚಿತ್ರಗಳನು ನೀಡುವಲ್ಲಿ ಯಶಸ್ವಿಯಾಗಿದಾರೆಯೆ?

**ದ್ವಾರಕೀಶ್:** ಅಂಥ ಪ್ರಯತ್ನಗಳು ಕೇವಲ ಬೆರಳೆಣಿಸುವಷ್ಟು ಮಾತ್ರ. 15 ಲಕ್ಷ ಸಂಪಾದಿಸಿದವರು ಮತ್ತೆ ಇನ್ನೊಂದು ಒಳ್ಳೆ ಚಿತ್ರ ಮಾಡೋ ಯೋಚನೆ ಮಾಡಲ್ಲ. ಸುಮ್ಮನೆ ಭಾರೀ ತಾರಾಗಣದ ಪಟ್ಟಿ ಕೊಟ್ಟು ಸರಸರ ಸುತ್ತಿ ಎರಡು ಲಕ್ಷ ಜನಕ್ಕೆ ಟೋಪಿ ಹಾಕ್ತಾರೆ. ಇದು ತಪ್ಪಬೇಕು. ಚಿತ್ರ ಚೆನ್ನಾಗಿದ್ರೆ ಜನ ದುಡ್ಡು ಕೊಟ್ಟೇ ಕೊಡ್ತಾರೆ. ಗುರು-ಶಿಷ್ಯರು ರೀಮೇಕ್ ಮಾಡಕ್ಕೆ 21 ಲಕ್ಷ ಖರ್ಚು ಮಾಡಿದೆ. ಜನ ನೂರು ದಿನ ಓಡಿಸಿದರಲ್ಲ. ನಾನು ಹಾಕಿದ ಹಣ ವಾಪಸ್ಸು ಕೊಟ್ಟರಲ್ಲ. ಚಿತ್ರ ಚೆನ್ನಾಗಿದೆ ಅನ್ನಬೇಕಾದರೆ ಈ ಸೆಟ್ಟು ಎಷ್ಟು ಶ್ರೀಮಂತವಾಗಿದೆ, ತಾಂತ್ರಿಕಾಂಶಗಳು ಎಷ್ಟು ಗಟ್ಟಿಯಾಗಿವೆ – ಅಭಿನಯ ಹೇಗಿದೆ ಅನ್ನೋದೂ ನೋಡ್ತಾರೆ ಜನ ಈಗ. "ಕುರಿಗಳು ಸಾರ್ ಕುರಿಗಳು" ಅಂತ ಅನ್ನೋ ಹಾಗಿಲ್ಲ ಜನಾನ.

**ಪ್ರಶ್ನೆ :** ಕೆಲವು ಕನ್ನಡ ಚಿತ್ರಗಳ ಟೈಟಲ್ ಕಾರ್ಡ್ ನೋಡಿದರೆ ಯಾವ ಭಾಷೆ ಅಂತ ಅರ್ಥವಾಗುಲ್ಲ... ಪ್ರಚಾರಕ್ಕಾಗಿ ಕಲಾವಿದರ ಕೈಲಿ ಬರೆಸುವ ದಪ್ಪ ಅಕ್ಷರದ ಜಾಹಿರಾತುಗಳಲ್ಲಿ ಈದಿನ ಪ್ರಾರಂಭ ಹೋಗಿ – ಈ ದನ ಪ್ರಾರಂಭ ಅಂತಿರುತ್ತೆ ಇಂಥ ಕನ್ನಡಾಭಿಮಾನಕ್ಕೆ ಏನು ಹೇಳ್ತೀರಿ?

**ದ್ವಾರಕೀಶ್ :** ಕನ್ನಡ ಬಲ್ಲ ಕಲಾವಿದರನ್ನೇ ಹುಡುಕಿ ಬರೆಸಬೇಕು, ಕಾಗುಣಿತ ತಪ್ಪಿದರೆ ತಿದ್ದಬೇಕು... ಏನು ಮಾಡಿದರೂ ನಮ್ಮ ಪ್ರೇಕ್ಷಕರು ಒಪ್ತಾರೆ ಅನ್ನೋ ದಿನ ಹೋಯಿತು.

**ಪ್ರಶ್ನೆ :** ಕಮೆಡಿಯನ್ ಜತೆಗೇ ನೀವು ನಾಯಕನಾಗಿಯೂ ಮೆಚ್ಚುಗೆ ಗಳಿಸಿದೀರಲ್ಲ ಇದರ ಗುಟ್ಟೇನು?

**ದ್ವಾರಕೀಶ್:** ವ್ಯಾಪಾರದಲ್ಲಿ ಗುಟ್ಟು ರಟ್ಟು ಮಾಡಬಾರದು. ನೀವು ಕೇಳಿದ್ರಿ ಅಂತ ಹೇಳ್ತೀನಿ. ಕನ್ನಡಾಭಿಮಾನಿಗಳ ಪ್ರೀತಿಯೇ ನನ್ನ ರಕ್ಷಾ ಕವಚ. ಜನ ನನ್ನ ಕೈ ಹಿಡಿದರು. ನಾನು ಅವರ ಕೈ ಹಿಡಿದೆ. ಜನ ಕೈಕೊಟ್ಟದ್ರೆ ಪಡ್ಚಾ.

**ಪ್ರಶ್ನೆ :** ಚಿತ್ರರಂಗದಲ್ಲಿ ಇಷ್ಟೊಂದು ಅನುಭವ ಇದ್ದೂ ನಿರ್ದೇಶನಕ್ಕೆ ಯಾಕೆ ಕೈಹಾಕಿಲ್ಲ?

**ದ್ವಾರಕೀಶ್ :** ಅದಕ್ಕೇಂತ ಬೇರೆ ಜನ ಇದಾರೆ. ಎಲ್ಲರ ಊಟವೂ ನನಗೇ ಬೇಕು ಅಂದ್ರೆ ಏನು ಚೆನ್ನಾಗಿರುತ್ತೆ.

**ಪ್ರಶ್ನೆ :** ಸ್ವಲ್ಪ ನಿಮ್ಮ ನಿರ್ದೇಶನ ತೆಗೆದುಕೊಳ್ಳುವಂಥ ನಿರ್ದೇಶಕರನ್ನೇ ಆಯ್ಕೆ ಮಾಡ್ತೀರಿ ಅಂತ ಒಂದು ಮಾತಿದೆಯಲ್ಲ.

**ದ್ವಾರಕೀಶ್ :** ಹಾಗೇನಿಲ್ಲ. ಕ್ಲಿಷ್ಟವಾದ ಸನ್ನಿವೇಶಗಳಲ್ಲಿ ನನಗೆ ತೋರಿದ್ದನ್ನ ಕೇಳಿದರೆ ಹೇಳ್ತೇನೆ – ಚರ್ಚೆ ಮಾಡ್ತೇನೆ. ಅವರಿಗೆ ಸರಿ ಅನ್ನಿಸಿದರೆ ಒಪ್ತಾರೆ. ಅದರಲ್ಲಿ ಒತ್ತಾಯವೇನಿಲ್ಲ.

**ಪ್ರಶ್ನೆ :** ಕಥೆ ಆಯ್ಕೆ ಮಾಡುವಾಗ ನಿಮಗೆ ಹೆಚ್ಚು ಅವಕಾಶ ಇರುವಂಥದನ್ನೇ ಆಯ್ಕೆ ಮಾಡ್ತೀರಾ ಹ್ಯಾಗೆ?

**ದ್ವಾರಕೀಶ್ :** ಒಟ್ಟು ಕಥೆ ನೋಡ್ತೀನಷ್ಟೆ. ಕಥೆ ಪರಿಣಾಮಕಾರಿಯಾಗಿರಬೇಕು. ಹೆಚ್ಚು ಆ್ಯಕ್ಷನ್‌ಗೆ ಅವಕಾಶವಿರಬೇಕು. 7 ಜನ ಕಮೆಡಿಯನ್ಸ್‌ನ ಹಾಕಿ ಚಿತ್ರ ತೆಗೆಯಲಿಲ್ವೆ?

**ಪ್ರಶ್ನೆ :** ಒಬ್ಬ ನಟನ ಹೆಸರಿಗೆ, ಸಾಹಿತಿಯ ಹೆಸರಿಗೆ, ನಿರ್ದೇಶಕನ ಹೆಸರಿಗೆ ಬೇರೆ ಭಾಷೆಯ ಜನ ಕೈಚಪ್ಪಾಳೆ ತಟ್ತಾರೆ – ಇಲ್ಲಿ ಹೇಗಂತೀರಿ...

**ದ್ವಾರಕೀಶ್ :** ಇಲ್ಲಿ ಸಾಹಿತಿಯನ್ನು ಆ ಮಟ್ಟದಲ್ಲಿ ಗುರುತಿಸಿಲ್ಲ ಸದ್ಯಕ್ಕೆ ಅನ್ನೋದು ನಿಜ. ಅದಕ್ಕೆ ಕಾರಣ ಅಂಥ ಸತ್ವಯುತವಾದ ಸಾಹಿತ್ಯವಿರುವ ಚಿತ್ರ ಬಂದಿಲ್ಲದೆ ಇರೋದು ಇರಬಹುದು. ಅಥವಾ ಸಾಹಿತ್ಯವೇ ರಕ್ತ ಮಾಂಸ ಎಲ್ಲ ಆಗಿ ಗೆದ್ದಂಥವು ಇಲ್ದೇ ಇರೋದರಿಂದ ಇರಬಹುದು ಅಲ್ಲದೇ ನಿರ್ಮಾಪಕರು ಅಂಥವಕ್ಕೆ ಅವ

ಕಾಶವೇ ಮಾಡಿಲ್ದೇ ಇರೋದರಿಂದ ಈ ಸ್ಥಿತಿ ಇರುಬಹುದು.

**ಪ್ರಶ್ನೆ :** ತುಂಬ ಅಶ್ಲೀಲವಾದ, ದ್ವಂದ್ವಾರ್ಥ ಬರುವಂಥ ಸಾಹಿತ್ಯ ಹೆಚ್ಚಾಗ್ತಿದೆಯಲ್ಲ.

**ದ್ವಾರಕೀಶ್ :** ಎಲ್ಲ ಮಸಾಲೆಗಳ ಜತೆ ಮಾತಿನ ಮಸಾಲೆಯೂ ಕ್ಲಾಷ್ ಆಗುತ್ತೆ ಅಂತ ಅರ್ಥವಾಗಿಬಿಟ್ಟಿದೆ ಚಿತ್ರರಂಗದವರಿಗೆ.

**ಪ್ರಶ್ನೆ :** ನಿಮ್ಮ ಗುರು-ಶಿಷ್ಯರು ಚಿತ್ರದ ನೂರನೇ ದಿನದ ಕಾರ್ಯಕ್ರಮಕ್ಕೆ ಬಂದಿದ್ವೆ... ಅದು ಸಂಗಮ್ ನಲ್ಲಿ...

**ದ್ವಾರಕೀಶ್ :** (ತಕ್ಷಣ) ಹೇಳ್ತೀನಿ. ಅದು ಓಡ್ತಿದ್ದದ್ದು ಕೆಂಪೇಗೌಡದಲ್ಲಿ. ಆ ತಾರೀಖಿಗೆ ಬೇರೆ ಯಾವುದೂ ಸಭಾಂಗಣ ಸಿಗಲಿಲ್ಲ. ಸಂಗಮ್‌ನಲ್ಲಿ ಶತದಿನೋತ್ಸವ ಮಾಡಿದೆವು. ನಾನು ಈ ವರೆಗೆ ಮಾಡಿದ ಚಿತ್ರಗಳಲ್ಲಿ ನೂರು ದಿನ ಓಡಿದ ಮೊದಲ ಚಿತ್ರ ಗುರು-ಶಿಷ್ಯರು. ಹಾಗಾದಾಗ ಕಾರ್ಯಕ್ರಮ ಭರ್ಜರಿಯಾಗಿ ಮಾಡಬೇಕು ಅಂತ ಆಸೆ ಸಹಜ ತಾನೆ. ಕನ್ನಡ ಚಿತ್ರಗಳೇ ಕನ್ನಡ ಚಿತ್ರಗಳಿಗೆ ಸ್ಪರ್ಧೆ ಆಗಿರೋ ಕಾಲ ಇದು. ಅಂಥ ವೇಳೇಲಿ ಚಿತ್ರ ಮಂದಿರದ ಸಮಸ್ಯೆ ಬಂದಾಗ ದೊಡ್ಡೋರು ಚಿಕ್ಕೋರಿಗೆ ಬಿಟ್ಟುಕೊಡೋದು ವಾಸಿ.

**ಪ್ರಶ್ನೆ :** ಚಿತ್ರರಂಗದಲ್ಲಿ ದೊಡ್ಡವರು - ಚಿಕ್ಕವರು ಅಂತ ಕಂಡುಹಿಡಿಯಲು ಇರುವ ಮಾನದಂಡ ಯಾವುದು?

**ದ್ವಾರಕೀಶ್ :** ಯಶಸ್ಸೇ ನಿಜವಾದ ಬ್ಯಾರಾಮೀಟರ್.

**ಪ್ರಶ್ನೆ :** ಒಂದು ಚಿತ್ರದ ಯಶಸ್ಸು – ಅಪಯಶಸ್ಸು ಕೊನೆಗೂ ಹೇಳೋರು ಜನರೇ. ಆದರೆ ಕಲಾವಿದರಲ್ಲಿ ಗುಂಪುಗಾರಿಕೆ ಹೋಗಿ ಸಂಘಟಿತರಾಗಿ ದುಡಿದರೆ ಬಹಳಷ್ಟು ದೊಡ್ಡ ಕೆಲಸ ಮಾಡಬಹುದಲ್ವೆ?

**ದ್ವಾರಕೀಶ್ :** (ಆಶ್ಚರ್ಯದಿಂದ) ಗುಂಪುಗಾರಿಕೆ... ಎಲ್ಲಿದೆ ಗುಂಪುಗಾರಿಕೆ ನಮ್ಮಲ್ಲಿ?

**ಪ್ರಶ್ನೆ :** ಚಿತ್ರ ಬರೆಯುವವರು, ನಾಟಕ ಕಲಾವಿದರು, ಎಲ್ಲರೂ ಎಲ್ಲಿದೆ ಗುಂಪುಗಾರಿಕೆ ಅಂತ್ಲೇ ಹೇಳ್ತಾರೆ. ಗೊತ್ತಿದ್ರೂ ಹೇಳಕ್ಕಾಗದ ಮೂಕ ವೇದನೆ ಅದು. ಅದಿರ್‍ಲಿ... ಸಂಘಟನೆ ಸಾಧ್ಯವೇ ಹೇಳಿ?

**ದ್ವಾರಕೀಶ್ :** ಖಂಡಿತಾ ಸಾಧ್ಯ... ಅದಕ್ಕೇ ಚಲನ ಚಿತ್ರ ಕಲಾವಿದರ ಸಂಘ ಅಂತ ಆರಂಭಿಸಿದೆವು. ಹಲವು ಕಾರ್ಯಕ್ರಮಗಳನ್ನು ಹಾಕಿಕೊಂಡೆವು. ಭವ್ಯವಾದ ಕನಸು ಕಟ್ಟಿದೆವು. ನಾವು ಅಂದುಕೊಂಡ ವೇಗದಲ್ಲಿ ಕೆಲಸ ಆಗಿಲ್ಲ–ಆಗುತ್ತೆ. ಚಿಕ್ಕಮಗಳೂರಲ್ಲಿ ಒಂದು ಕಾರ್ಯಕ್ರಮ ಮಾಡಬೇಕೂಂತಿದೀವಿ. ಏನಾದರೂ ಅನ್ಕೂಲ ಮಾಡಿ ಕೊಡತೀವಿ ನಿಧಾನವಾಗಿ.

**ಪ್ರಶ್ನೆ :** ನೀವು ಏನೇ ಹೇಳಿದರೂ ಕಲಾವಿದರ ಸಂಘದ ಬಹಳಷ್ಟು ಸದಸ್ಯರಿಗೆ – ಚಿತ್ರಗಳಲ್ಲಿ ಅವಕಾಶ ಸಿಕ್ಕೀತು ಅಂತ – ಅವಕಾಶ ಕಲ್ಪಿಸಿಯಾರು ಅಂತ ಆಸೆ ಇರುತ್ತೆ.

**ದ್ವಾರಕೀಶ್ :** ಮೆಂಬರ್ ಆದವರಿಗೆ ಚಿತ್ರದಲ್ಲಿ ಅವಕಾಶ ಮಾಡಿಕೊಡ್ತೀವಿ ಅಂತ ಹೇಳಿಲ್ಲವಲ್ಲ – ಚಿತ್ರಗಳಲ್ಲಿ ಮಾಡ್ತಿರೋರು ಮೆಂಬರಾಗಿ ಅಂದಿದೀವಷ್ಟೆ.

**ಪ್ರಶ್ನೆ :** ಸಿನಿಮಾಗಳಲ್ಲಿ ಹೆಚ್ಚು ಅವಕಾಶವಿಲ್ಲದ ಪ್ರತಿಭಾವಂತ ನಟ-ನಟಿಯರನ್ನೇ ಒಂದು ಗುಂಪಾಗಿ ಮಾಡಿ – ನಾಟಕ ಆಡಲಿಕ್ಕೆ ಅವಕಾಶ ಮಾಡಿಕೊಟ್ಟು ಆದಿನ ಚಿತ್ರರಂಗದ ಖ್ಯಾತ ನಟ-ನಟಿಯರು ಅವರ ಸಲುವಾಗಿ ಮುಖ್ಯ ಅತಿಥಿಗಳಾಗಿ ಬಂದರೂ ಜನ ಬರ್ತಾರಲ್ಲ. ಅಂತ ಪ್ರಯತ್ನ ನಿಮಗೆ ಏನು ಅನ್ನಿಸತ್ತೆ?

**ದ್ವಾರಕೀಶ್ :** ಐಡಿಯಾ ಚೆನ್ನಾಗಿದೆ, ಉಪಯೋಗಿಸ್ಕೋತೀವಿ.

**ಪ್ರಶ್ನೆ :** ಈಗ ಚಿತ್ರರಂಗ ನಿಮಗೆ ಏನು ಅನ್ನಿಸತ್ತೆ.

**ದ್ವಾರಕೀಶ್ :** ನಾನು ಈ ಸಂದರ್ಶನಕ್ಕೆ ಬಿಡುವಾಗಿ ಸಿಕ್ಕೆ ಅಂದ್ರೆ ಚಿತ್ರರಂಗ ಡಲ್ ಅಂತ ಲೆಕ್ಕ. ಆದರೆ ಇಷ್ಟು ಹೇಳಬಲ್ಲೆ... ಚಿತ್ರಗಳು ಇವತ್ತು ಬರ್‍ತಿರೋ ಸ್ಪೀಡಲ್ಲಿ ಬರ್‍ತಾ ಹೋದ್ರೆ ಆಕ್ಸಿಡೆಂಟ್ ಗ್ಯಾರಂಟಿ. ವರ್ಷಕ್ಕೆ 65 ಚಿತ್ರಗಳು ಅಂದ್ರೆ ಕಷ್ಟ. ಈ ಸರಿ ನೋಡಿ 8 ಜನಕ್ಕೆ ಅಸಲು ಬಂದಿದೆ. 4ಜನ ಮಾತ್ರ ಜಾಸ್ತಿ ದುಡ್ಡು ಮಾಡಿದಾರೆ.

**ಪ್ರಶ್ನೆ :** ಇವೆರಡರಲ್ಲಿ ನೀವು ಯಾವ ಗುಂಪಿಗೆ ಸೇರ್‍ತೀರಿ.

**ದ್ವಾರಕೀಶ್ :** (ನಕ್ಕು) ಹಹ... ನಾಲ್ಕು ಜನರಲ್ಲಿ ನಾನೂ ಒಬ್ಬ.

**ಪ್ರಶ್ನೆ :** ಮಾಮೂಲೀ ಧಾಟಿ ಬಿಟ್ಟು – ಹೊಸತನಕ್ಕೆ ಎಡೆ ಇರುವಂಥ ಚಿತ್ರಗಳು ಬಂದರೆ ವಾಸಿ ಅನ್ನಿಸತ್ತೆ ಈ ಸಂದರ್ಭದಲ್ಲಿ.

**ದ್ವಾರಕೀಶ್ :** ಚಲನಚಿತ್ರ ಸಮೂಹ ಮಾಧ್ಯಮ. ಅದರಿಂದ ದೊಡ್ಡ ಕೆಲಸ ಸಾಧ್ಯ. ಆಗ ಒಳ್ಳೆ ಪ್ರಭಾವ ಬೀರಬಹುದು. ಅಂಥ ಹೊಸತನವಿರುವ ಕಥೆ ಬೇಕೆ? ನಾನೇ ಬರ್‍ಕೊಂಬಿಡೋಣ ಅಂತ ಕೂತ್ಕೊಂಡಿದೀನಿ ಎಷ್ಟು ಸಲ. ಬರದಿದ್ವೆಲ್ಲ ನಾನೇ ಓದ್ಕೊಂಡು ಹರಿದು ಹರಿದು ಬಿಸಾಕಿದಾಗ ನಂಗೆ ಗ್ಯಾರಂಟಿ ಆಯ್ತು ನಾನು ಸಾಹಿತಿ ಅಲ್ಲ ಅಂತ. ಅಂಥ ಒಂದು ಹೊಸ ಬಗೆ ಕಥೆ ಬಂತು ಅನ್ನಿ. ನಿರ್ದೇಶಕರು...

**ಪ್ರಶ್ನೆ :** ಚಿತ್ರಕ್ಕೆ ಹೊಸ ಆಯಾಮ ನೀಡುವಂಥ ನಿರ್ದೇಶಕರು ಇಲ್ಲ ಅಂತೀರಾ...

**ದ್ವಾರಕೀಶ್ :** ಅರೆ! ಯಾವ ಹುತ್ತದಲ್ಲಿ ಯಾವ ಹಾವೋ?? ಎಂಥ ಪ್ರತಿಭಾವಂತ ಎಲ್ಲಿ ಯಾವ ಮೂಲೇಲಿ ಕೊಳೀತಿದಾನೋ ಯಾರಿಗೆ ಗೊತ್ತು...

**ಪ್ರಶ್ನೆ :** ಹಾಗಲ್ಲ... ಈಗಾಗಲೇ ಹಲವಾರು ಚಿತ್ರಗಳಿತ್ತು ಹೆಸರಾಗಿದಾರಲ್ಲ.

**ದ್ವಾರಕೀಶ್ :** ಸಿದ್ದಲಿಂಗಯ್ಯ – ಪುಟ್ಟಣ್ಣನಂಥವರು ಮಾಡಬಲ್ಲರು...

**ಪ್ರಶ್ನೆ :** ಜನ ಸ್ಟಾರ್ ನೋಡಿಕೊಂಡು ಬರ್‍ತಾರೆ ಅಂತೀರಾ?

**ದ್ವಾರಕೀಶ್ :** ಅದೂ ನಿಜ ಇರಬಹುದು. ಆದ್ರೆ ಮ್ಯಾಟ್ನೀಗೆ ಮಾತ್ರ. ಕಥೆ ಭದ್ರವಾಗಿದ್ದರೇ ಜನ ಒಪ್ಪಿಕೊಳ್ಳೋದು – ಹೌಸ್‌ಫುಲ್ ಆಗೋದು.

**ಪ್ರಶ್ನೆ :** ಕಳಪೆ ಚಿತ್ರಗಳನ್ನೇ ಕೊಡುತಿದ್ರೆ ಕನ್ನಡಿಗರೇನು ಮಾಡಬೇಕು.

**ದ್ವಾರಕೀಶ್ :** ಕಳಪೆ ಅನ್ನಿಸಿದರೆ ನೋಡೋದನ್ನ ನಿಲ್ಲಿಸಬೇಕು. ಚಿತ್ರ ಉಳಿಸೋದು – ಮಲಗಿಸೋದೂ ಅವರ ಕೈಲೇ ಇದೆಯಲ್ಲ. ನಾವೇನು ಮಾಡಬಲ್ಲೆವು–ಚಿತ್ರ ತೆಗೀಬಲ್ಲೆವು – ಚಿತ್ರ ನೋಡಿರಪ್ಪ ಅಂತ ಹೇಳಬಲ್ಲೆವು. ಇದರಲ್ಲಿ ಕನ್ನಡತನವಿಲ್ಲ ಅಂದ್ರೆ ಅವರು ಯಾಕೆ ನೋಡ್ತಾರೆ. ರೇಡಿಯೋ ಕೇಳ್ತಿದ್ದವನು ಈ ಸ್ಟೇಷನ್ ಬೇಜಾರಾದ್ರೆ ಇನ್ನೊಂದು ಸ್ಟೇಷನ್ ತಿರುಗಿಸಲ್ವೆ; ಹಾಗೆ ಇನ್ನೊಂದು ಚಿತ್ರಕ್ಕೆ ಹೋಗ್ತಾರೆ. ನಾವು ಏನು ಮಾಡಬಹುದು – ಬೇರೆ ಭಾಷೆ ಚಿತ್ರಗಳನ್ನೇ ನೂರಾರು ದಿನ ಓಡಿಸೋ ಕನ್ನಡ ಕುಲಕೋಟಿಯೇ, ನೀವು ಮೊದಲು ಕನ್ನಡಿಗರು ಅನ್ನೋದು ಮರೀಬೇಡಿ ಅಂತ ಹೇಳಬಹುದು.

**ಪ್ರಶ್ನೆ :** ಕಲಾವಿದರಿಗೆ ಮೊದಲು ಒಂದು ಅವಕಾಶ



"ಪೆದ್ದ-ಗೆದ್ದ" ಚಿತ್ರದಲ್ಲಿ ದ್ವಾರಕೀಶ್

ಸಿಕ್ಕರೆ ನಂತರ ಕರೆ ಬರುತ್ತೆ ಅಂತೀರಾ?

**ದ್ವಾರಕೀಶ್ :** ಒಂದು ಚಿತ್ರಕ್ಕೆ ನಿರ್ದೇಶಕ - ನಿರ್ಮಾಪಕ ಅವಕಾಶ ಮಾಡಬಹುದು. ಆನಂತರ ಕಲಾವಿದ ತನ್ನ ಕೆಪ್ಯಾಸಿಟಿ ಮೇಲೆ ನಿಂತ್ಕೋಬೇಕಾಗುತ್ತೆ. ಅದಕ್ಕೆ ಪುಷಿಂಗ್ ನೇಚರ್ ಬೇಕು, ಜತೆಗೆ ಅದೃಷ್ಟವೂ ಇರಬೇಕು.

**ಪ್ರಶ್ನೆ :** ಗುರು-ಶಿಷ್ಯರು ನೂರು ದಿನ ಓಡಿದಾಗ ನಿಮ್ಮ ಅನಿಸಿಕೆ...

**ದ್ವಾರಕೀಶ್ :** ರೆಕ್ಕೆ ಕಟ್ಟಿಕೊಂಡು ಹಾರಿಬಿಡೋಣ.

**ಪ್ರಶ್ನೆ :** ರೆಕ್ಕೆ ಅನ್ನುತ್ಲು ಜ್ಞಾಪಕಕ್ಕೆ ಬಂತು – ಒಬ್ಬ ನಟ ರಾಜಕೀಯದಲ್ಲಿ ಇನ್‌ವಾಲ್ವ್ ಆಗುವುದರ ಬಗ್ಗೆ ಅವನ ಕಮಿಟ್‌ಮೆಂಟ್ ಬಗ್ಗೆ ಏನು ಹೇಳ್ತೀರಿ?

**ದ್ವಾರಕೀಶ್ :** ಅದು ನಟರ ವೈಯಕ್ತಿಕ ವಿಚಾರಧಾರೆ.

**ಪ್ರಶ್ನೆ :** ಹಾಗಾದರೆ ನಿಮ್ಮ ಸ್ವಂತ ವಿಚಾರಧಾರೆ ಹೇಳಿ.

**ದ್ವಾರಕೀಶ್:** ಎಲ್ಲಾ ಕಡೆ ಒಳ್ಳೆಯವರು – ಕೆಟ್ಟವರು ಇದ್ದಹಾಗೆ ಕಾಂಗ್ರೆಸಲ್ಲೂ ಒಳ್ಳೆಯವರು ಕೆಟ್ಟವರು ಇದ್ದಾರೆ. ಈಗಿನ ಮಂತ್ರಿಮಂಡಲ ಚಿತ್ರರಂಗಕ್ಕೆ ಬಹಳಷ್ಟು ನೆರವಾಗಿದೆ. ನಮ್ಮನ್ನ ಬಹಳ ಪ್ರೀತಿಯಿಂದ ಕಾಣ್ತಿದಾರೆ ನಮ್ಮ ಗೆಳೆಯರನ್ನು ಮುಖ್ಯವಾದ ಹುದ್ದೆಗಳಿಗೆ ಆರಿಸಿದಾರೆ. ನಮಗೆ ಅವರು ತುಂಬಾ ಗೌರವ ಕೊಟ್ಟಿರೋದರಿಂದ ನಾವೂ ಅವರಿಗೆ ಗೌರವ ಕೊಡ್ತಿದೀವಿ

**ಪ್ರಶ್ನೆ :** ಚುನಾವಣೆ ಸಮಯದಲ್ಲಿ ನಮ್ಮ ಪಕ್ಷದ ಪರವಾಗಿ ಮಾತನಾಡಿ ಬನ್ನಿ ಅಂತ ಕರೆ ಬಂದರೆ ನೀವು ಹೋಗ್ತೀರಾ?

**ದ್ವಾರಕೀಶ್ :** ಅವರು ಕರೆದರೆ ಖಂಡಿತಾ ಹೋಗ್ತೀವಿ.

**ಪ್ರಶ್ನೆ :** ಹೋಗ್ತೀವೀನೋ ಅಥವಾ ಹೋಗ್ತೀನಿ ಅಂದ್ರೋ?

**ದ್ವಾರಕೀಶ್ :** ನಾನೊಬ್ಬನೆ ಅಲ್ಲ. ಚಿತ್ರರಂಗದ ನನ್ನ ಕೆಲವು ಆತ್ಮೀಯರೂ ನನ್ನೊಂದಿಗೆ ಬರೋದರಿಂದ 'ಹೋಗ್ತೀವಿ' ಅಂತ ಅಂದೆ.

**ಪ್ರಶ್ನೆ :** ಹಾಗೆ ಭಾಷಣಕ್ಕೆ ಹೋಗೋವಾಗಲೂ ಕಲಾವಿದರ ಸಂಘಕ್ಕೆ ಇಷ್ಟು ಹಣ ಕೊಡಿ ಅಂತ ಕಾಂಗ್ರೆ



ನವರನ್ನು ಕೇಳ್ತೀರಾ?

**ದ್ವಾರಕೀಶ್ :** (ನಕ್ಕು) ಹಹಹ... ಇಲ್ಲ... ಇಷ್ಟಕಷ್ಟೆ ಈಗ ಅಂಥ ರೂಲ್ಸ್‌ನೇ ತೆಗೀಬೇಕೂಂತಿದೀವಿ.

**ಪ್ರಶ್ನೆ :** ಅಲ್ಲ ಯಾಕೆ ಕೇಳಿದೆ ಅಂದ್ರೆ ಗುರುಶಿಷ್ಯರು ನೂರನೇ ದಿನದಂದು ನೀವು – ಶಿವರಾಮ್ – ವಿಷ್ಣುವರ್ಧನ್ ಅವರು ಮುಖ್ಯಮಂತ್ರಿ ಗುಂಡೂರಾಯರನ್ನು, ಅರ್ಥಸಚಿವ ಮೊಯ್ಲಿಯವರನ್ನು ಸ್ವಾಗತಿಸೋವಾಗ ವಾಲಗ ಊದುತ್ತಾ, ಡೋಲು ಬಾರಿಸಿದರಲ್ಲ ಅದಕ್ಕೆ ಕೇಳಿದೆ.

**ದ್ವಾರಕೀಶ್:** ತಮಾಷೆಗೆ, ಜನರಿಗೆ ಮನೋರಂಜನೆ ಇರಲಿ ಅಂತ ಹಾಗೆ ಮಾಡಿದೆವು.

**ಪ್ರಶ್ನೆ :** ವಿದೇಶೀಯರೊಬ್ಬರು ಬಂದಾಗ ಬದಲಾವಣೆ ಹಾಗೂ ಅಟ್ರ್ಯಾಕ್ಷನ್ ಸಲುವಾಗಿ ಚಿತ್ರನಟರು ಸ್ವಾಗತ ಮಾಡಲಿ ಅಂದರೆ ವಾಲಗ ಊದುತ್ತೀರಾ?

**ದ್ವಾರಕೀಶ್ :** ಗುಂಡೂರಾಯರು ಕರೆದರೆ ನಾನಂತೂ ಹೋಗ್ತೀನಿ. ಮತ್ತೆ ಹೇಳ್ತೀನಿ ಯಾಕೆ ಅಂದ್ರೆ ಚಿತ್ರರಂಗದ ಮಂದಿಯನ್ನು ಅವರು ಬಹಳ ಗೌರವದಿಂದ ಕಾಣ್ತಾರೆ. 50% ತೆರಿಗೆ ವಿನಾಯಿತಿ ಕೊಟ್ಟಿದ್ದಾರೆ. ಇದಕ್ಕಿಂತ ಹೆಚ್ಚು ಅನುಕೂಲ ಇನ್ನು ಯಾರ್‍ಯಾರೂ ಮಾಡಿದರೆ ಅವರಿಗೂ ಜೈ ಅಂತೀನಿ.

**ಪ್ರಶ್ನೆ :** ನಿಮ್ಮ ಮಕ್ಕಳನ್ನು ಚಿತ್ರರಂಗಕ್ಕೆ 'ಭೂ' ಬಿಡುವ ಆಲೋಚನೆ ಉಂಟೆ?

**ದ್ವಾರಕೀಶ್ :** ಖಂಡಿತಾ ನಮಗೇನು ಅಂಥ ಇಷ್ಟ ಇಲ್ಲ. ನಾಳೆ ನಾನು ಹೋಗೇ ಹೋಗ್ತೀನಿ ಅಂತ ಅಂದರೆ ಅದು ಅವರಿಗೆ ಬಿಟ್ಟದ್ದು. ಈಗ 66 ಜನ ನಿರ್ಮಾಪಕರಿದ್ದಾರೆ ನಮ್ಮ ಮಕ್ಕಳ ಕಾಲಕ್ಕೆ 660 ಜನ ಆಗಿರ್‍ತಾರೆ.

**ಪ್ರಶ್ನೆ :** ಮೊದಲು ನಿಮಗೆ ಅವಕಾಶ ಮಾಡಿದವರು?

**ದ್ವಾರಕೀಶ್ :** ನಮ್ಮ ಸೋದರ ಮಾವ ಹುಣಸೂರು ಕೃಷ್ಣಮೂರ್ತಿ ಚಿತ್ರರಂಗದಲ್ಲಿ ಮೊದಲ ಅವಕಾಶ ಕೊಟ್ಟರು.

**ಪ್ರಶ್ನೆ :** ಅದಕ್ಕೂ ಮುಂಚೆ?

**ದ್ವಾರಕೀಶ್ :** ಕಾಲೇಜು ನಾಟಕಗಳಲ್ಲಿ ಅಭಿನಯಿಸಿದ್ದೆ ಅಷ್ಟೆ. ಚಿತ್ರದಲ್ಲಿ ಮಾಡಿದ ಮೇಲೆ ಅಲ್ಲಿ ಇಲ್ಲಿ ಕರೆಯೋಕೆ ಶುರುಮಾಡಿದ್ರು. ಆಮೇಲೆ ನನ್ನ ಹೆಂಡತಿ ಅಂಬುಜಾ 'ಮೇಯರ್ ಮುತ್ತಣ್ಣ' ತೆಗೆದು ನಿರ್ಮಾಪಕಿ ಆದಳು. ನರಸಿಂಹರಾಜು ಜತೆ ನಾನು ತುಂಬಾ ಚಿಕ್ಕ ಪಾತ್ರಗಳು ಮಾಡಿದೆ – ತಾಳ ತಟ್ಟಿದೆ. ಅದಕ್ಕೆಲ್ಲ ಫೀಲ್ ಮಾಡಲಿಲ್ಲ. ಒಬ್ಬ ಕಲಾವಿದ ಪರಿಪಕ್ವವಾಗೋಕೇ ಅಂಥ ಅನುಭವಗಳೂ ಅಗತ್ಯ. ಹಾಗೆ ಆದಾಗ್ಲೇ ಯಾವ ಪಾತ್ರವನಾದರೂ ಮಾಡಬಲ್ಲೆ ಅನ್ನೋ ಆತ್ಮವಿಶ್ವಾಸ ಬರೋದು.

**ಪ್ರಶ್ನೆ :** ಅಂದಹಾಗೆ ನಿಮ್ಮ ಮದುವೆ?

**ದ್ವಾರಕೀಶ್ :** ಲವ್ ಮ್ಯಾರೇಜ್.

**ಪ್ರಶ್ನೆ :** ಚಲನಚಿತ್ರ ಗೀತೆಗಳು ಆಕಾಶವಾಣೀಲಿ ಮೇಲಿಂದ ಮೇಲೆ ಕೇಳಿಬರುವುದರಿಂದ ಅದು ಚಿತ್ರ ಪ್ರೇಕ್ಷಕರ ಸಂಖ್ಯೆ ಹೆಚ್ಚಿಸಲು ಏನಾದರೂ ಅನುಕೂಲವಾಗುತ್ತೆ?

**ದ್ವಾರಕೀಶ್ :** ಇಲ್ಲ ಅನ್ನಿಸತ್ತೆ.

**ಪ್ರಶ್ನೆ :** ಕಾಲೇಜುಗಳಲ್ಲಿ, ಸಾರ್ವಜನಿಕ ಸಮಾರಂಭಗಳಲ್ಲಿ, ಕಾಲೇಜಿನ ಕಾರ್ಯಕ್ರಮಗಳಲ್ಲಿ ನಟ-ನಟಿಯರು ಭಾಗಿಯಾಗುವುದರಿಂದ ಏನಾದರೂ ಅನುಕೂಲ ಉಂಟೆ?

**ದ್ವಾರಕೀಶ್ :** ಖಂಡಿತಾ... ನಟ ಪ್ರೇಕ್ಷಕರೊಂದಿಗೆ ಆತ್ಮೀಯನಾಗ್ತಾನೆ. ಪ್ರೇಕ್ಷಕರೂ ನಟನನ್ನು ಪ್ರೀತಿಯಿಂದ ಕಾಣ್ತಾರೆ. ಏಯ್, ನಮ್ಮಲ್ಲಿಗೆ ಬಂದಿದ್ನಲ್ಲ ಗುರು – ನಡಿ ನೋಡುವ ಅಂತ ಬರುವವರ ಸಂಖ್ಯೆ ಏರುತ್ತೆ. ಪಬ್ಲಿಕ್ ಕಾಂಟಾಕ್ಟ್ ಯಾವತ್ತೂ ಒಳ್ಳೇದೇ. ಅವರು ನಮಗೆ ಅನ್ನ ಹಾಕುವ ದಣಿಗಳಲ್ಲವೆ... ಅವರ ಒಲವು ಗಿಟ್ಟಿಸ್ಕೊಂಡ್ರೆ – ಥಿಯೇಟರ್ ಮುಂದೆ ಬೆಳದೇ ಬೆಳೆಯುತ್ತೆ. ಕ್ಯೂ ಬೆಳೀತೂಂದ್ರೆ ಮಾರ್ಕೆಟ್ ಬರುತ್ತೆ. ಮಾರ್ಕೆಟ್ ಬಂತೂಂದ್ರೆ ನಿರ್ಮಾಪಕರು ಅಡ್ರಸ್ ಹುಡಕ್ಕೊಂಡು ಬರ್‍ತಾರೆ.

**ಪ್ರಶ್ನೆ :** ಮುಂದೆ ನಿಮ್ಮ ಯೋಜನೆ?

**ದ್ವಾರಕೀಶ್ :** ಚಿತ್ರರಂಗಕ್ಕೆ ಒಂದು ನಮಸ್ಕಾರ ಹೊಡೆದುಬಿಡೋಣಾಂತಿದ್ದೆ. ಆಮೇಲೆ ಬಹಳಷ್ಟು ಮಂದಿ ಹಾಗೆ ಮಾಡಬಾರದು ದ್ವಾರಕೀಶ್ ಅಂದರು. ಸರಿ ಅಂತ ಮನಸ್ಸು ಬದಲಾಯಿಸಿದೆ. ಯಾವ ಚಿತ್ರ ಅಂತ ಯೋಚನೆ ಮಾಡ್ತಿದೀನಿ.

**ಪ್ರಶ್ನೆ :** ಪತ್ರಿಕೆಗಳ ಹಾಗೂ ಚಿತ್ರರಂಗದ ಸಾಮರಸ್ಯ ಹೇಗಿದೆ?

**ದ್ವಾರಕೀಶ್ :** ಸುದ್ದಿ-ಸಮಾಚಾರಗಳನ್ನು ಪ್ರಕಟಿಸಿ – ನಾವೆಲ್ಲಿದೀವಿ – ಏನು ಮಾಡ್ತಿದೀವಿ, ಚುರುಕಾಗಿದೀವಾ ತೂಕಡಿಸ್ತಿದೀವಾ ಅನ್ನೋದನ್ನ ಕೆಲವು ಸಲ ತುಂಬ ರಂಗುರಂಗಾಗಿ ಹಲವು ಸಲ ಚುರುಕ್ ಅಂತ ಬಿಸಿ ಮುಟ್ಟಿಸೋ ಹಾಗೆ ಬರೀತಾರೆ – ಪ್ರಚಾರ ಕೊಡ್ತಾರೆ – ಸಂತೋಷ. ಕೆಲವು ಸಲ ವಿಮರ್ಶೆ ಮಾಡುವಾಗ ತುಂಬಾ ನೋವಾಗೋ ಹಾಗೆ ಬರೆದುಬಿಡ್ತಾರೆ. ಲಕ್ಷಾಂತರ ರೂಪಾಯಿ ಖರ್ಚು ಮಾಡಿದ್ದು – ನೀರಿನಲ್ಲಿ ಹೋಮ ಮಾಡಿದ ಹಾಗೆ ಆಗಿಬಿಡುತ್ತೆ. ವಿಮರ್ಶೆ ಅಂದ ಮೇಲೆ ಟೀಕೆ ಇರಲಿ – ಬೇಡ ಅನ್ನಲ್ಲ. ಆದರೆ ಸಾಧ್ಯವಾದಷ್ಟು ಟೀಕೆ ಕಡಿಮೆ ಮಾಡಿದರೆ ಕನ್ನಡ ಚಿತ್ರರಂಗಕ್ಕೆ ಉಪಕಾರ ಮಾಡಿದ ಹಾಗೆ ಆಗುತ್ತೆ ಅಂತ ನಂಗೆ ಅನ್ಸುತ್ತೆ. ಸಿಂಗಾಪುರದಲ್ಲಿ ರಾಜಾ ಕುಳ್ಳ ಸಿನಿಮಾಮಾಡಿದೆ. ಅದನ್ನು "ಡಾಕ್ಯುಮೆಂಟರಿ ಆನ್ ಸಿಂಗಾಪುರ್" ಅಂದುಬಿಟ್ರು. ನಂಗೆ ಹ್ಯಾಗೆ ಆಗಬೇಡ. ಅದೇ ವಿದೇಶದಲ್ಲಿ ಹೋದಾಗ ಇಂಗ್ಲಿಷ್ ಚಿತ್ರಕ್ಕೆ ಸರಿಸಮವಾಗಿದೆ ಅಂತ ಬಾಯಿತುಂಬ ಹೊಗಳಿದರು. ವಿಮರ್ಶೆ ಹೀಗೇ ಮಾಡಿ ಅಂತ ಹೇಳಬಾರದು – ಸರಿ. ಆದ್ರೆ ಪ್ಲಸ್ ಪಾಯಿಂಟ್ಸ್‌ನ ಹೈಲೈಟ್ ಮಾಡಿ, ಮೈನಸ್ ಪಾಯಿಂಟ್ಸ್ ಸ್ವಲ್ಪ ಕಡಿಮೆ ಹೇಳಿ ಅನ್ನಬಹುದು.

**ಪ್ರಶ್ನೆ :** ಗುರುಶಿಷ್ಯರು 100ನೇ ದಿನ ನೀವು ವಿಮರ್ಶೆಗೆ ಒಂದು ಬಹುಮಾನ ನೀಡಿದಿರಿ. ಅಂದರೆ ಮೆಚ್ಚಿಕೆ ಆ ಮಾದರಿ ಇರಲಿ ಅಂತ್ಲಾ?

**ದ್ವಾರಕೀಶ್ :** ಚಿತ್ರರಂಗಕ್ಕೆ ಪ್ರೆಸ್‌ನವರ ನೆರವೂ ಇದೆ. ನಮಗೆ ಪ್ರಿಯವಾದ ವಿಮರ್ಶೆಗೆ ನಾವು ಕೊಟ್ಟಿದೀವಿ. ಅದೂ ಒಂದು ಎನ್‌ಕರೇಜ್‌ಮೆಂಟ್ ಅಲ್ವೆ? ಚಿತ್ರಾನ 50 – 60 ಸಲ ನೋಡಿ ಪ್ರೋತ್ಸಾಹಿಸಿರೋನಿದ್ರೆ, ಅವನಿಗೂ ಒಂದು ಷೀಲ್ಡ್ ಕೊಡಬಹುದು.

**ಪ್ರಶ್ನೆ :** ಹೆಂಗಸರ ವಯಸ್ಸು – ಗಂಡಸರ ಸಂಬಳ ಕೇಳಬಾರದಂತೆ?

**ದ್ವಾರಕೀಶ್ :** ಈಗ ಕಾಲ ಬದಲಾಗಿದೆ. ಆದರಿಂದ ಗಂಡಸರ ವಯಸ್ಸು – ಹೆಂಗಸರ ಸಂಬಳ ಕೇಳಬಾರದು ಅಂತ ಅನ್ನೋದಿಲ್ಲ ನಾನು. ಈಗ ನಂಗೆ 39ರ ನವಯೌವನ. ಆಗಿರೋದು 5 ಮಕ್ಕಳು. ಐದೂ ಗಂಡೆ.

**ಪ್ರಶ್ನೆ :** ಮುಂದಿನ ಯೋಜನೆ?

**ದ್ವಾರಕೀಶ್ :** ಹೊಸ ರೀತಿಯ ಕಥೆ – ಹೊಸ ಮುಖಗಳನ್ನು ಬಳಸಿ ಒಂದು ಒಳ್ಳೆ ಚಿತ್ರ ಮಾಡುವ ಉದ್ದೇಶ ಇದೆ. ಅದಕ್ಕಾಗಿ ನಿರಂತರವಾಗಿ ಯೋಚಿಸ್ತಿದೀನಿ... ಹಿಂದಿಯ ಖ್ಯಾತ ನಟರನ್ನು ಕನ್ನಡ ಚಿತ್ರದಲ್ಲಿ for a change ಆಗಿ ಬಳಸೋಣ ಅಂತ. ಅವರಿಗೂ ಕನ್ನಡದ ಕಂಪಿನ ಅರಿವಾಗಲಿ.

**ಪ್ರಶ್ನೆ :** ಕನ್ನಡ ರಾಜ್ಯೋತ್ಸವದ ಬೆಳ್ಳಿಹಬ್ಬ ನಡೆಯಿತಲ್ಲ ಇಂಥ ವೇಳೇಲಿ ಕರೆದಾಗ ಚಿತ್ರನಟ-ನಟಿಯರು ಸರಿಯಾಗಿ ಸಹಕರಿಸಲಿಲ್ಲ ಅಂತ ಬಹಳ ಕನ್ನಡ ಸಂಘಗಳ ಆರೋಪವಿದೆ – ಏನಂತೀರಿ?

**ದ್ವಾರಕೀಶ್ :** ರಾಜ್ಯೋತ್ಸವವನ್ನು ನವೆಂಬರ್ ಪೂರ್ತಿ ಒಬ್ಬೊಬ್ಬರು ಒಂದೊಂದು ದಿನ ಮಾಡ್ತಿರ್‍ತಾರೆ. ಎಲ್ಲರೂ ಪ್ರೀತಿಯಿಂದ್ಲೇ ಕರೀತಾರೆ. ಎಷ್ಟು ಕಡೆ ಹೋಗೋದು. ಆದರಿಂದ ನಮ್ಮ ಕಲಾವಿದರ ಸಂಘಕ್ಕೆ ಶಕ್ತ್ಯಾನುಸಾರ ಕಾಣಿಕೆ ನೀಡಿ ಅಂದೆವು. ಆದರ ಉದ್ದೇಶವೇ ಬೇರೆ ಇತ್ತು. ಆ ಮೂಲಕವೂ ಸಂಘಕ್ಕೆ ಒಂದಿಷ್ಟು ಹಣ ಬಂದಿದೆ.

**ಪ್ರಶ್ನೆ :** ಹೀಗೆ ಹಣ ಕೂಡಿಸುವುದರ ಉದ್ದೇಶ?

**ದ್ವಾರಕೀಶ್ :** ಅಕಸ್ಮಾತ್ ಯಾರಾದ್ರೂ ತೀರಿಕೊಂಡರೆ ಅವರ ಮನೆಯವರು ಬೀದಿಗೆ ಬೀಳಬಾರದಲ್ವೆ? ತುಂಬ ಖಾಯಿಲೇಲಿ ಇರೋರಿಗೆ ಧನಸಹಾಯ ಮಾಡಬೇಕಾಗುತ್ತಲ್ವೆ? ಕಲಾವಿದರ ಸಂಘಕ್ಕೆ ಕಟ್ಟಡ ಬೇಕಾಗುತ್ತಲ್ವೆ? ಹೀಗೆ ಏನೇನೋ ಯೋಜನೆಗಳು.

**ಪ್ರಶ್ನೆ :** ಅಂತೂ ಕೇಳಿದ ಪ್ರಶ್ನೆಗಳಿಗೆಲ್ಲ ಪಟಪಟ ಉತ್ತರ ಹೇಳಿದಿರಿ ವಂದನೆಗಳು.

**ದ್ವಾರಕೀಶ್ :** ನಂಗೆ ಪಟಪಟ ಅಂತ ಮಾತಾಡಿಯೇ ಅಭ್ಯಾಸ. ಅದೂ ರೂಪತಾರಾಗಾಗಿ ಸಂದರ್ಶನ ಅಂದ್ರೆ ಸಂಭ್ರಮ ಅಲ್ಲವೆ?

●






"ಧರ್ಮ" ಚಿತ್ರಣ ಸಮಯದಲ್ಲಿ: ಛಾಯಾಗ್ರಾಹಕ ಬಿ. ಎಸ್. ಹರಿದಾಸ್, ನಿರ್ದೇಶಕ ವಿಜಯ್ ಗುಜ್ಜಾರ್, ತಾರೆ ಸ್ವಪ್ನಾ.

**ಮಾ। ಹಿರಣ್ಣಯ್ಯ ಸಂಪ್ರದಾಯದಲ್ಲಿ**

ತಮ್ಮ ಜನಪ್ರಿಯ ನಾಟಕಗಳಿಂದ, ಮಾತಿನ ಚಕಮಕಿಯಿಂದ ಹೆಸರಾದ ನಟ ಮಾಸ್ಟರ್ ಹಿರಣ್ಣಯ್ಯ ಸಂಪ್ರದಾಯದ ನಿರ್ದೇಶಕರೂ ಸಹ. ಎಸ್.ಪಿ; ವಾಣಿ ಜಯರಾಂ ಚಿತ್ರಕ್ಕಾಗಿ ಹಾಡಿದ್ದಾರೆ. ಮಾ। ಹಿರಣ್ಣಯ್ಯ, ಭಾರತಿ, ಛಾಯಾಪತಿ, ಹೇಮಾ ಚೌಧರಿ, ಸೀತಾರಾಂ, ರತ್ನಾಕರ್ ಮುಂತಾದವರು ತಾರಾಗಣದಲ್ಲಿದ್ದಾರೆ. ಲಂಗುಲಗಾಮಿಲ್ಲದೆ ಮಾತನ್ನು ಹರಿಯಬಿಟ್ಟು ಅದನ್ನೇ ನಾಟಕದ ಬಂಡವಾಳವೂ ಮಾಡಿಕೊಂಡಿರುವ ಮಾ॥ ಹಿರಣ್ಣಯ್ಯ ಈ ಬಾರಿ ಚಿತ್ರ ಮಾಧ್ಯಮ ಹೇಗೆ ಬಳಸಿದ್ದಾರೋ ಎಂಬುದನ್ನು ಕಾಣಲು ಕನ್ನಡಿಗರು ಕಾಯುತ್ತಿದ್ದಾರೆ.

* * *

**ಬೂದಿ ಮುಚ್ಚಿದ ಕೆಂಡ**

ಮಾದಕ ಕಣ್ಣುಗಳು – ಮೋಹಕ ಕುಣಿತ ಜಯಮಾಲಿನಿಯಿಂದ. ಪ್ರಭಾಕರ್ ಹಾಗೂ ಶ್ರೀನಾಥ್ ಈ ದೃಶ್ಯದಲ್ಲಿ ಭಾಗಿಗಳು. ಈ ದೃಶ್ಯದೊಂದಿಗೆ ಚಿತ್ರ ಮುಗಿಯಲಿದೆ. ಶ್ರೀನಾಥ್, ರೂಪಾ, ಚಂದ್ರಶೇಖರ್, ಶಕ್ತಿಪ್ರಸಾದ್, ರತ್ನಾಕರ್ ಮುಂತಾದವರು ನಟವರ್ಗದಲ್ಲಿದ್ದಾರೆ. ಕಥೆ ಸೋಮಶೇಖರ್ ಅವರದು; ಮಾತು ದೊಡ್ಡರಂಗೇಗೌಡ; ಸಂಗೀತ ಜಿ. ಕೆ. ವೆಂಕಟೇಶ್. ಎನ್. ಜಿ. ರಾವ್ ಅವರ ಕ್ಯಾಮರಾ ಕೈಚಳಕ ವಿಶೇಷ. ಚಿತ್ರಕತೆ - ನಿರ್ದೇಶನ : ಜಿ. ಶಿವಮೂರ್ತಿ.

* * *

**ಒಂದು ಘಟ್ಟ ಮುಗಿಯಿತು – ರುಕ್ಕು ನಕ್ಕಾಗ**

ಕೊಳ್ಳೇಗಾಲದಲ್ಲಿ ರುಕ್ಕು ನಕ್ಕ ಒಂದು ಪ್ರಸಂಗ ಮುಗಿದಿದೆ. ಒಂದು ಹೆಣ್ಣು – ಆರು ಕಣ್ಣು. ಕಥೆ ಬಸವರಾಜ್ ಕೆಸ್ತೂರ್ ಅವರದು. ಚಿತ್ರ ನಿರ್ದೇಶನವೂ ಕೆಸ್ತೂರ್ ಅವರದೇ. ಸುಂದರಕೃಷ್ಣ ಅರಸ್, ಶ್ರೀಲಲಿತಾ, ಶರಪಂಜರ ಅಯ್ಯಂಗಾರ್, ಶೋಭಾ, ಉಷಾರಾಣಿ ಅವರೊಂದಿಗೆ ನವನಟ ಚಂದ್ರನಾಥ್ ಕಾಣಿಸಿಕೊಳ್ಳಲಿದ್ದಾರೆ.

* * *

**ಅರಮನೆಯಲ್ಲಿ ಮುಳ್ಳಿನ ಗುಲಾಬಿ**

ಬೆಂಗಳೂರು ಅರಮನೆ ಮತ್ತು ಮುಳ್ಳಿನ ಗುಲಾಬಿ. ಚಿತ್ರ ನಿರ್ದೇಶಕರು ವಿಜಯ. ಎರಡನೆಯ ಹಂತದ ಚಿತ್ರಣ ಅರಮನೆಯಲ್ಲಿ. ಅನಂತನಾಗ್, ಆರತಿ, ರೂಪ, ಜೈ ಜಗದೀಶ್, ಪ್ರಭಾಕರ್, ದಿನೇಶ್, ಮುಸುರಿ, ರಾಜಾನಂದ್ ಮುಂತಾದವರು ತಾರಾಗಣದಲ್ಲಿದ್ದಾರೆ. ಲಾಂಛನ : ನವದುರ್ಗ ಪ್ರೊಡಕ್ಷನ್ಸ್.

* * *

**ದೇಹಲಿಯಲ್ಲಿ ಹೊಸಬೆಳಕು**

ಕಾದಂಬರಿಯನ್ನು ಚಿತ್ರಕ್ಕೆ ಅಳವಡಿಸುವಲ್ಲಿ ದೊರೆ-ಭಗವಾನ್ ಈಗಾಗಲೆ ಸಾಕಷ್ಟು ಹೆಸರಾಗಿದ್ದಾರೆ. ಈ ಬಾರಿ ಅವರ ಆಯ್ಕೆ ವಾಣಿ ಅವರ ಹೊಸ ಬೆಳಕು. ಹೊಸ ಅಲೆಯ ಚಿತ್ರಗಳಿಂದ ಹೆಸರಾಗಿ ವ್ಯಾಪಾರೀ ಚಿತ್ರರಂಗದಲ್ಲೂ ಇದೀಗ ಭದ್ರವಾಗಿ ಬೇರು ಬಿಡುತ್ತಿರುವ ಬಿ. ಸಿ. ಗೌರಿಶಂಕರ್ ಅವರ ಕ್ಯಾಮರಾ ವರ್ಕ್. ಸಂಗೀತ ನಿರ್ದೇಶಕರು: ಎಂ. ರಂಗರಾವ್. ಸರಿತಾ, ಶ್ರೀನಿವಾಸಮೂರ್ತಿ, ಸುಮಲತಾ, ಶೋಭಾ, ಅಶ್ವತ್ಥ್, ಶಿವರಾಂ, ಉದಯ ಕುಮಾರ್, ಸುಧಾ ಸಿಂಧೂರ್ ಪಾತ್ರವರ್ಗದಲ್ಲಿದ್ದಾರೆ.

* * *



'ಪ್ರಾಯ-ಪ್ರಾಯ-ಪ್ರಾಯ' ಚಿತ್ರದ ಹಾಡುಗಳ ಧ್ವನಿ ಮುದ್ರಣ ಸಂದರ್ಭದಲ್ಲಿ: ಚಂದೂಲಾಲ್ ಜೈನ್, ಜಯಚಂದ್ರನ್, ಟಿ. ಎಸ್. ನಾಗಾಭರಣ ಹಾಗೂ ವಾಣಿಜಯರಾಂ.

**'ಪ್ರಾಯ' ಮುಗಿಯಿತು**

ನಿರ್ಮಾಮಿಕ ಮೂವೀಸ್ ಅವರ ಪ್ರಾಯ ಇದೀಗ ಮುಗಿಯಿತು. ಚಿತ್ರದ ಅಂತ್ಯದ ಭಾಗ ಹೋಟಲೊಂದರಲ್ಲಿ ನಡೆಯಿತು. ಸುಂದರರಾಜ್ ಹಾಗೂ ಮಮತಾ ರಾವ್ ಭಾಗವಹಿಸಿದ್ದರು ಚಿತ್ರೀಕರಣದಲ್ಲಿ. ಮೈಸೂರಿನ ಬಹಳಷ್ಟು ಕಾಲೇಜುಗಳಲ್ಲಿ ಹಾಗೂ ಸುತ್ತಮುತ್ತ ಚಿತ್ರದ ಬಹಳಷ್ಟು ಭಾಗ ಚಿತ್ರೀಕರಿಸಲಾಗಿದೆ. ರಾಮಕೃಷ್ಣ, ವಿಜಯಲಕ್ಷ್ಮಿ ಸಿಂಗ್, ಸುಂದರರಾಜ್, ಮಮತಾರಾವ್ ಅವರ ಭಾಗದ ಹಾಡು - ನೃತ್ಯಗಳ ಭಾಗ ತುಂಬ ಚೆನ್ನಾಗಿ ಬಂದಿದೆಯಂತೆ. ಚಾಮುಂಡಿಬೆಟ್ಟದಲ್ಲಿ ಕ್ಲೈಮಾಕ್ಸ್ ದೃಶ್ಯ ತುಂಬ ಜೋರಾಗಿ ಚಿತ್ರೀಕರಿಸಿದ್ದಾರಂತೆ ನಿರ್ದೇಶಕ ಟಿ. ಎಸ್. ನಾಗಾಭರಣ. ಸಂಭಾಷಣೆ ಬಿ. ಎಲ್. ವೇಣು ಅವರದು. ಸಂಗೀತ ಉಪೇಂದ್ರಕುಮಾರ್. ಗೀತೆಗಳನ್ನು ಬರೆದಿರುವವರು ಆರ್. ಎನ್. ಜಯಗೋಪಾಲ್, ದೊಡ್ಡರಂಗೇಗೌಡ. ನೃತ್ಯಸಂಯೋಜನೆ ಉಡುಪಿ ಜಯರಾಂ. ಸಿ. ಆರ್. ಸಿಂಹ, ಬಾಲಕೃಷ್ಣ, ಅನಂತರಾಮ ಮಚ್ಚೇರಿ, ಪ್ರಶಾಂತಿನಾಯಕ್, ಹಾಗೂ ಆದರ್ಶ ಫಿಲಂ ಇನ್‌ಸ್ಟಿಟ್ಯೂಟ್‌ನ ಹಲವು ವಿದ್ಯಾರ್ಥಿಗಳೂ ಇದ್ದಾರೆ.

* * *

**ತಿರುಮಲ ಫಿಲಂಸ್ ಅವರಿಂದ ಅರ್ಚನಾ**

ಚಂದೂಲಾಲ್ ಜೈನ್, ಆರತಿ, ಡೆಲ್ಲಿ ಮುಂತಾದ ಬಹಳಷ್ಟು ಮಂದಿ ನಿರ್ಮಾಪಕರಾಗಿರುವ ಈ ಚಿತ್ರದ ನಾಯಕ-ನಾಯಕಿ ಅಶೋಕ್ ಹಾಗೂ ಆರತಿ. ನಿರ್ದೇಶಕರು ಮಣಿಮುರಗನ್. ಶಂಕರನಾಗ್, ಮಂಜುಳಾ, ಲೋಕೇಶ್, ಲೋಕನಾಥ್, ಮುಸುರಿ ಮುಂತಾದವರು ಪಾತ್ರವರ್ಗದಲ್ಲಿದ್ದಾರೆ.

* * *

**ಮುಕ್ತಾಯ ಘಟ್ಟದಲ್ಲಿ ಸರ್ಪಚುಂಬನ**

ಇಂದುಶ್ರೀ ಮೈಮರೆತು ಸೊಗಸಾಗಿ ನರ್ತಿಸಿದರು. ಭಾಸ್ಕರ್ ಅವರ ನೃತ್ಯ ಸಂಯೋಜನೆಯೂ ನೃತ್ಯ ಸೊಗಸಾಗಲು ಕಾರಣ. ಸಂಗೀತ ಕೆ. ಪಿ. ಸುಖದೇವ್. ಹಾಡಿದವರು ಕೆ. ವಿ. ಬ್ರಹ್ಮಂ ಹಾಗೂ ಬೆಂಗಳೂರು ಲತಾ. ಕಲ್ಯಾಣ್‌ಕುಮಾರ್ ಮುಖ್ಯ ಪಾತ್ರದಲ್ಲಿದ್ದಾರೆ. ಚಿತ್ರಕಥೆ ಸಂಭಾಷಣೆ ರಾಮಚಂದ್ರ ಪ್ರಭು ಅವರದು. ನಿರ್ದೇಶನ : ಅಶ್ವತ್ಥ್ ಟಿ. ಬಿ. ಘರ ಅವರದು.

* * *

**ಹಿಡಂಬಿ ಹಳ್ಳಿ ಪ್ರವೇಶ**

ವಿನೂತನ ಶೈಲಿ ಬೇಕೆ? – ಇಲ್ಲದೆ. ಕೊಲೆಯ ರಹಸ್ಯ ಬೇಕೆ? – ಇಲ್ಲಿದೆ. ಹೊಸ ಮುಖಗಳು ಬೇಕೆ?– ಇಲ್ಲಿದೆ. ಹೆಸರು ವಿಶೇಷವೇ – ಹಿಡಂಬಿ ಹಳ್ಳಿ ಪ್ರವೇಶ. ಚಿತ್ರ ಮುಕ್ಕಾಲು ಭಾಗ ಮುಗಿದಿದೆ. ನಿರ್ಮಾಪಕಿ: ಶ್ರೀಮತಿ ಶಾಂತರಾಜ್. ಗುರು ಶಂಕರ್, ರಾಜಾನಂದ್, ಮಹಾವೀರ ಜೈನ್, ಎಲ್ ಸಿದ್ದರಾಜು ಮುಂತಾದವರು ತಾರಾಗಣದಲ್ಲಿದ್ದಾರೆ. ಚಿತ್ರ ತಯಾರಕರು – ಶ್ರೀ ಮಧುರ ಕಾಳಿ ಫಿಲಂಸ್. ನಿರ್ದೇಶಕರು: ಹೊಸಕೆರೆ ರಾಜು.

* * *



'ಶಂಕರ್ ಸುಂದರ್' ಚಿತ್ರದ ಸೆಟ್‌ನಲ್ಲಿ ನಿರ್ಮಾಪಕ ಆರ್. ಎಸ್. ಮಾಣಿಕ್ ಚಂದ್ ಅವರ ಹುಟ್ಟುಹಬ್ಬ ಆಚರಿಸಿದಾಗ. ಕಲ್ಲೇಶ, ಅಂಬರೀಷ್, ಎ. ಟಿ. ರಘು, ಕುಲಶೇಖರ್, ದಿನೇಶ್, ಸುಧೀರ್ ಹಾಗೂ ಇತರರು.

**ವರುಣಾ ಮೂವೀಸ್ ಅವರ ಶಂಕರ್-ಸುಂದರ್ ಮುಕ್ತಾಯ**

ಉತ್ಸಾಹೀ ನಿರ್ದೇಶಕ ಎ. ಟಿ. ರಘು ಚಿತ್ರ ಮುಗಿಸಿದ್ದಾರೆ. ಶಾಂತರಾಜ್ ಅವರ ಕಥೆ – ಎನ್. ಎಸ್. ರಾವ್ ಅವರ ಸಂಭಾಷಣೆ. ವಿಶೇಷಗಳನ್ನು ಹೇಳಬೇಕೆಂದರೆ ಅಂಬರೀಷ್ ದ್ವಿಪಾತ್ರದಲ್ಲಿದ್ದಾರೆ. ಜಯಮಾಲಾ, ಸ್ವಪ್ನ, ದ್ವಾರಕೀಶ್, ದಿನೇಶ್, ಸುಂದರ ಕೃಷ್ಣ ಅರಸ್, ಸುಧೀರ್, ಶಶಿಕಲಾ, ಸುರೇಖಾ ಮುಂತಾದವರು ತಾರಾಗಣದಲ್ಲಿದ್ದಾರೆ.

* * *

**ಸಾಹಸಸಿಂಹ ಡಬ್ಬಿಂಗ್**

ಚಿಕ್ಕಪುಟ್ಟ ದೃಶ್ಯಗಳ ಪ್ಯಾಚ್‌ವರ್ಕ್ ಕಂಠೀರವದಲ್ಲಿ ನಡೆದಿದೆ. ಚಾಮುಂಡೇಶ್ವರಿ ಸ್ಟುಡಿಯೋದಲ್ಲಿ ಡಬ್ಬಿಂಗ್ ಬಿರುಸಿನಿಂದ ಮುಗಿದಿದೆ. ಈ ಅದ್ದೂರಿ ಸಾಹಸಮಯ ಚಿತ್ರದ ನಿರ್ದೇಶಕರು ಜೋ ಸೈಮನ್. ಕಥೆ: ಮನು ಅವರ ಚಕ್ರವ್ಯೂಹ. ಸಂಭಾಷಣೆ ಕುಣಿಗಲ್ ನಾಗಭೂಷಣ್. ವಿಷ್ಣುವರ್ಧನ್, ಕಾಜಲ್ ಕಿರಣ್, ರಾಜ್ಯಲಕ್ಷ್ಮಿ, ಅರಿಕೇಸರಿ, ಶಕ್ತಿಪ್ರಸಾದ್ ಮುಂತಾದವರು ತಾರಾಗಣದಲ್ಲಿದ್ದಾರೆ.

* * *

**ಡಬ್ಬಿಂಗ್ ಹಂತದಲ್ಲಿ ಗರುಡರೇಖೆ**

ತರಂಗಿಣಿ ಆರ್ಟ್ ಪ್ರೊಡಕ್ಷನ್ಸ್ ಅವರ "ಗರುಡರೇಖೆ" ಸಾಹಸಮಯ ಚಿತ್ರ. ಈ ಕಾಲದಲ್ಲಿ ಚಿತ್ರ ತೆಗೆಯುವುದೇ ಒಂದು ಸಾಹಸ. ಇನ್ನು ಕಥೆಯೂ ಸಾಹಸಮಯವೇ ಎಂದಮೇಲೆ ಮತ್ತಷ್ಟು ಕುತೂಹಲ ಸಹಜ. ಇದೀಗ ಚಾಮುಂಡೇಶ್ವರಿ ಸ್ಟುಡಿಯೋದಲ್ಲಿ ಡಬ್ಬಿಂಗ್ ಮುಗಿದಿದೆ. ಛಾಯಾಗ್ರಾಹಕ ಪ್ರಕಾಶ್ ಈ ಚಿತ್ರದಿಂದ ನಿರ್ದೇಶಕರ ಸಾಲಿಗೆ ಬಂದು ನಿಂತಿದ್ದಾರೆ. ಸಂಗೀತ – ಸತ್ಯಂ ಅವರದು; ಸಾಹಿತ್ಯ ಸೋಮಶೇಖರ್. ಶ್ರೀನಾಥ್, ಅಂಬಿಕಾ, ಮಾಧವಿ, ವಜ್ರಮುನಿ, ಕೆ. ವಿಜಯ, ಪ್ರಭಾಕರ್, ದಿನೇಶ್, ಶಕ್ತಿಪ್ರಸಾದ್, ಪೇಮಾಚೌಧುರಿ, ಮಲ್ಲಿಕಾ ಮುಂತಾದವರು ತಾರಾಗಣದಲ್ಲಿದ್ದಾರೆ.

* * *

– ವಿಜಯಾ, ಬೆಂಗಳೂರು ಪ್ರತಿನಿಧಿ

# ಸುದ್ದಿ-ಸಂಭ್ರಮ-ಸಮಾರಂಭ




ಸುರೇಶ್ ಹೆಬ್ಳೀಕರ್ ನಿರ್ದೇಶನದ 'ಅಂತರಾಳ' ಚಿತ್ರದ ಮುಹೂರ್ತ ಸಮಾರಂಭದಲ್ಲಿ ಎಸ್. ಆರ್. ಪುಟ್ಟಣ್ಣ ಕಣಗಾಲ್ ಕ್ಲಾಪ್ ಮಾಡುತ್ತಿರುವುದು.

**ದ್ವಾರಕೀಶ್ ಅವರಿಂದ ಅದೃಷ್ಟವಂತ**

ದ್ವಾರಕೀಶ್ ನಾಮಕರಣ ಮಾಡುವುದರಲ್ಲೂ ಜಾಣ. ಡಿ. ಆರ್. ಫಿಲಂಸ್ ಅವರಿಗಾಗಿ ದ್ವಾರಕೀಶ್ ಅಣಿಮಾಡುವ ಚಿತ್ರದ ಹೆಸರೇ ಅದೃಷ್ಟವಂತ. ನಿರ್ದೇಶಕರು : ರಾಮಚಂದ್ರು. ದ್ವಾರಕೀಶ್ ಅವರೊಂದಿಗೆ ಲೋಕೇಶ್, ಶ್ರೀನಿವಾಸಮೂರ್ತಿ, ಸುಲಕ್ಷಣ, ರತ್ನಾಕರ್ ಮುಂತಾದವರಿದ್ದಾರೆ. ಶ್ರೀನಾಥ್ ಗೌರವ ನಟರಾಗಿ ಮಿನುಗಲಿದ್ದಾರೆ. ಫೆಬ್ರವರಿಯ ಕೊನೇ ವಾರದಲ್ಲಿ ಚಿತ್ರ ಪ್ರಾರಂಭ.

* * *

**ಅಮರಕವಿ ಕಾಳಿದಾಸ/ಹಾಡುಗಳು**

ಆನಂದಲಕ್ಷ್ಮಿ ಎಂಟರ್‌ಪ್ರೈಸಸ್‌ನವರಿಂದ ಅಮರಕವಿ ಕಾಳಿದಾಸ ಇದೀಗ ತೆರೆಗೆ ಬರಲಿದೆ. ಈ ವರ್ಣಚಿತ್ರದಲ್ಲಿ ಡಾ|| ರಾಜಕುಮಾರ್, ಜಯಪ್ರದಾ, ಶ್ರೀನಿವಾಸ ಮೂರ್ತಿ, ಕೆ. ವಿಜಯಾ, ಬಾಲಕೃಷ್ಣ, ಮುಸುರಿ, ಶಿವಪ್ರಕಾಶ್ ಮುಂತಾದವರು ಅಭಿನಯಿಸಲಿದ್ದಾರೆ. ಸಂಗೀತ ಎಂ. ರಂಗರಾವ್. ನಿರ್ದೇಶಕರು : ರೇಣುಕಾ ಶರ್ಮ. ಇದೇ ಹೆಸರಿನ ಚಿತ್ರ ಬಹು ಹಿಂದೆಯೇ ಕಪ್ಪುಬಿಳುಪಿನಲ್ಲಿ ಬಂದಿದ್ದು ನಮ್ಮ ಕನ್ನಡಿಗರು ಮರೆತಿಲ್ಲ. ಅದರ ನಿರ್ದೇಶಕರು ದಿ|| ಕು. ರಾ.ಸೀ.; ಬಿ. ಸರೋಜಾದೇವಿ ಅಭಿನಯಿಸಿದ ಒಂದು ಅರ್ಥದ ಮೊದಲ ಚಿತ್ರ. ಹೊನ್ನಪ್ಪ ಭಾಗವತರು ಮುಖ್ಯ ಪಾತ್ರದಲ್ಲಿದ್ದರು. ಅ.ನ.ಕೃ. ತುಂಬ ಮೆಚ್ಚಿದ್ದ ಚಿತ್ರ ಅದು. ಕಾಳಿದಾಸನ ಕಥೆ ಯಾವ ಕಾಲಕ್ಕೂ ಆಗುವಂಥದು. ಕಾದು ನೋಡುವ ಈ ಬಾರಿಯೂ ಭರ್ಜರಿ ಸಾಹಸವನ್ನು.

* * *

**ಮತ್ತೊಂದು ಭಕ್ತಿಚಿತ್ರ : ಭಕ್ತ ಜ್ಞಾನದೇವ**

ಜನಮನದ ನಾಡಿ ಭಕ್ತಿಯತ್ತ ಹೆಚ್ಚು ಮಿಡಿಯುತ್ತದೆ ಎಂಬುದರ ಸೂಕ್ಷ್ಮ ಅರಿತು ಬಹುಮಂದಿ ಈಗ ಅತ್ತಲೇ ವಾಲುತ್ತಿದ್ದಾರೆ. ರಾಜಕಮಲ್ ಆರ್ಟ್ಸ್ ಸಂಸ್ಥೆ ಇದೀಗ ಭಕ್ತ ಜ್ಞಾನದೇವ ಅದ್ದೂರಿ ವರ್ಣಚಿತ್ರ ತೆರೆಗೆ ಅರ್ಪಿಸಲಿದ್ದಾರೆ. ಇಂಥ ಚಿತ್ರಗಳಲ್ಲಿ ಹೆಚ್ಚು ನಿಷ್ಠೆ ತೋರುವ ಹುಣಸೂರು ಕೃಷ್ಣಮೂರ್ತಿ ಚಿತ್ರ ನಿರ್ದೇಶಿಸಲಿದ್ದಾರೆ. ಚಿತ್ರದ ರಾಗ ಸಂಯೋಜನೆ ಜಿ. ಕೆ. ವೆಂಕಟೇಶ್ ಅವರದು. ರಾಮಕೃಷ್ಣ, ಶ್ರೀನಿವಾಸಮೂರ್ತಿ, ಜಯಂತಿ, ತೂಗುದೀಪ, ರಾಜಾನಂದ್, ಬೇಬಿ ರೇಖಾ ಮುಂತಾದವರು ತಾರಾಗಣದಲ್ಲಿದ್ದಾರೆ. ನಿರ್ಮಾಪಕರು : ಕೆ.ಸಿ. ಎನ್. ಚಂದ್ರಶೇಖರ್. ಚಿತ್ರದ ಆರಂಭ ತಿಂಗಳ ಕೊನೆಯಲ್ಲಿ.

* * *

**ಅಬ್ಬಾಯಿ ನಾಯುಡು ಅವರಿಂದ ಮತ್ತೊಂದು ಚಿತ್ರ**

ಚೆಲ್ಲಿದ ರಕ್ತ ತೆರೆಗಿತ್ತ ಅಬ್ಬಾಯಿ ನಾಯಿಡು ಇದೀಗ ಅದೇ ಬಿರುಸಿನಲ್ಲಿ ಮತ್ತೊಂದು ಚಿತ್ರ ಕೆ. ಎಸ್. ಆರ್. ದಾಸ್ ಅವರ ನಿರ್ದೇಶನದಲ್ಲಿ ತೆರೆಗೀಯಲಿದ್ದಾರೆ. ಕೇಂದ್ರ ಪಾತ್ರಗಳಲ್ಲಿರುವವರು ವಿಷ್ಣುವರ್ಧನ್ ಹಾಗೂ ಶಂಕರನಾಗ್. ಆರತಿ, ಸ್ವಪ್ನ, ಪ್ರಭಾಕರ್ ಇನ್ನಿತರ ಪಾತ್ರಗಳಲ್ಲಿದ್ದಾರೆ.

**ದೊಡ್ಡಬಳ್ಳಾಪುರ ಮತ್ತು ಸನ್ಮಾನ**

ಶ್ರೀ ಭುವನೇಶ್ವರಿ ಕನ್ನಡ ಸಂಘದವರು ವಿಜಯಾ ಪಿಕ್ಚರ್ಸ್‌ನ ನಾಯರ್ ಅವರನ್ನು ಶಾಲು ಹೊದಿಸಿ ಸನ್ಮಾನಿಸಿ, ನಟಿ ಮಂಜುಳಾ ಅವರಿಗೆ ಕಲಾಪ್ರಪೂರ್ಣ ಎಂಬ ಬಿರುದನ್ನು ನೀಡಲಾಯಿತು.

* * *

**ಎಚ್. ಜಿ. ರಾಧಾದೇವಿ ಅವರ ಸುವರ್ಣಸೇತುವೆ**

ಬಾಳಿಗಾ ಸೋದರರು ಈ ಬಾರಿ ಕಾದಂಬರಿಯೊಂದನ್ನು ಚಿತ್ರಕ್ಕೆ ಆಯ್ಕೆ ಮಾಡಿದ್ದಾರೆ. ಚಿತ್ರಕಥೆ - ಸಾಹಿತ್ಯ ಹಾಗೂ ನಿರ್ದೇಶನದ ಹೊಣೆ ಗೀತಪ್ರಿಯ ಅವರದು.



ಕೋಲಾರದ ಭುವನೇಶ್ವರಿ ಕನ್ನಡ ಸಂಘದವರು ವಿಜಯಾ ಪಿಕ್ಚರ್ಸ್‌ನ ನಾಯರ್ ಅವರನ್ನು ಸನ್ಮಾನಿಸಿದ ಸಂದರ್ಭದಲ್ಲಿ 'ಮರೆಯಲಾಗದ ಕಥೆ' ಚಿತ್ರದ ನಿರ್ಮಾಪಕ ಜೆ. ಎನ್. ಗೋಪಾಲ್ ಅವರು ಪುಷ್ಪಹಾರ ಅರ್ಪಿಸುತ್ತಿದ್ದಾರೆ. ಚಿತ್ರದಲ್ಲಿರುವ ಇತರರು : ತಾರೆ ಮಂಜುಳಾ, ವಿತರಕ ಕೆ. ಎಚ್. ನಾಗರಾಜ್, ಛೇಂಬರ್ ಅಧ್ಯಕ್ಷ ಎ. ಆರ್. ರಾಜು.

ವಿಷ್ಣುವರ್ಧನ್, ಆರತಿ, ಬೇಬಿ ರೇಖಾ, ಧೀರೇಂದ್ರಗೋಪಾಲ್, ದಿನೇಶ್, ರಾಜಾನಂದ್, ಟೊಮೆಟೊ ಸೋಮು ಮುಂತಾದವರು ತಾರಾಗಣದಲ್ಲಿದ್ದಾರೆ. ಸಂಗೀತ ವಿಜಯಭಾಸ್ಕರ್ ಅವರದು. ಕ್ಯಾಮರಾ ಕುಲಶೇಖರ್ ಅವರದು.

ಜನಪ್ರಿಯ ಕೃತಿ ಹೇಗೆ ಚಿತ್ರವಾಗಿ ಬಂದೀತು ಎಂಬುದನ್ನು ಕಾತರದಿಂದ ನಿರೀಕ್ಷಿಸುತ್ತಿದ್ದಾರೆ ಕನ್ನಡಾಭಿಮಾನಿಗಳು.

* * *

**ಕಣ್ಣು ತೆರೆಸಿದ ಹೆಣ್ಣು**

ಅಶೋಕ್ ಎಂಟರ್‌ಪ್ರೈಸಸ್ ಅವರಿಗಾಗಿ ನಿರ್ದೇಶಕ ಮಣಿಮುರಗನ್ ಹೆಣ್ಣಿನ ಮೂಲಕ ಕಣ್ಣು ತೆರೆಸಲಿದ್ದಾರೆ. ಆರತಿ, ಅಶೋಕ್, ಪ್ರಮೀಳಾ ಜೋಷಾಯ್, ಇಂದ್ರಜಿತ್, ಮುಸುರಿ, ರಾಜಾನಂದ್, ಚೇತನ್‌ರಾಮರಾವ್, ಬಿ. ಕೆ. ಶಂಕರ್ ಮುಂತಾದವರು ತಾರಾಗಣದಲ್ಲಿದ್ದಾರೆ. ಹಾಡಿನ ಧ್ವನಿಮುದ್ರಣ ಈಗ. ಹೂಗಾರ್ ಅವರ ಕಥೆ – ಎನ್. ಎಸ್. ರಾವ್ ಸಂಭಾಷಣೆ. ಚಿತ್ರೀಕರಣ ಮಾರ್ಚ್ ಮೊದಲ ವಾರದಲ್ಲಿ.

* * *

**ಪ್ರಿಯದರ್ಶಿನಿಗೆ ಎರಡು ಹಾಡುಗಳು**

ಶ್ರೀ ಬಾಬಾ ಬೇಲಾನಾಥ್ ಮೂವೀಸ್ ಅವರಿಗಾಗಿ ಎಸ್.ಪಿ. ಹಾಗೂ ಎಸ್. ಜಾನಕಿ ಎರಡು ಗೀತೆಗಳನ್ನು ಹಾಡಿದ್ದಾರೆ. ಸಂಗೀತ ನಿರ್ದೇಶಕರು ಶ್ಯಾಂ. ಮಾರ್ಚ್‌ನಲ್ಲಿ ಮಡಿಕೇರಿ ಸುತ್ತಮುತ್ತ ಷೂಟಿಂಗ್. ಕಥೆ-ಚಿತ್ರಕಥೆ-ಸಂಭಾಷಣೆ-ನಿರ್ದೇಶನ ರಾಜಕಿಶೋರ್ ಅವರದು. ತಾರಾಗಣ ಗೊತ್ತಾಗಬೇಕಿದೆ.

* * *

**ರವಿ ಸಿನಿಕ್ರಿಯೇಷನ್ಸ್/ಸಿ. ವಿ. ರಾಜೇಂದ್ರನ್**

ರವಿಚಂದ್ರನ್ ಎನ್. ವೀರಾಸ್ವಾಮಿ (ಈಶ್ವರಿ ಪಿಕ್ಚರ್ಸ್) ಅವರ ಕುವರ. ಆತ ಈ ಬಾರಿ ರವಿ ಸಿನಿ ಕ್ರಿಯೇಷನ್ಸ್ ಲಾಂಛನದಲ್ಲಿ ತೆರೆಗರ್ಪಿಸುವ ಚಿತ್ರದ ನಿರ್ದೇಶಕರು ಸಿ. ವಿ. ರಾಜೇಂದ್ರನ್. ವಿಶೇಷವೆಂದರೆ: ಚಿತ್ರ ಫೆಬ್ರುವರಿ 7ರಂದು ಆರಂಭ. ಅಂದೇ ವೀರಾಸ್ವಾಮಿ ಅವರ ಮಗಳ ಮದುವೆ ಸಹಾ. ಚಿತ್ರದ ಬಿಡುಗಡೆ ಏಪ್ರಿಲ್ 17ರಂದು. ಅಂದು ವೀರಾಸ್ವಾಮಿ ಅವರ 51ನೇ ವರ್ಷದ ಹುಟ್ಟುಹಬ್ಬ. ಚಿತ್ರೀಕರಣ: ಕಂಠೀರವದಲ್ಲಿ. ಕ್ಯಾಮರಾ: ಚಿಟ್ಟಿಬಾಬು. ಸಾಹಸ, ರಂಜನೆ, ಕೌಟುಂಬಿಕ ಹಿನ್ನೆಲೆ ಹೀಗೆ ಎಲ್ಲ ಮಸಾಲೆಗಳ ಆಗರ ಕಥೆ. ಎಚ್. ವಿ. ಸುಬ್ಬರಾವ್ ಕಥೆಗಾರರು. ಸಂಗೀತ ಶಂಕರ್-ಗಣೇಶ್. ಅಂಬರೀಷ್, ಜಯಮಾಲಾ, ದ್ವಾರಕೀಶ್, ಸುಂದರಕೃಷ್ಣ ಅರಸ್ ಮುಂತಾದವರು ತಾರಾಗಣದಲ್ಲಿದ್ದಾರೆ.

* * *

**ವೀರಪ್ಪ ಮೊಯ್ಲಿ ಅವರ ಸುಳಿಗಾಳಿ ತೆರೆಗೆ**

ಎಸ್. ಡಿ. ಅಂಕಲಗಿ ಮಿತ್ರರು ಈ ಬಾರಿ ಅರ್ಥಸಚಿವರ ಕತೆಯೊಂದನ್ನು ತೆರೆಗೆ ತರಲಿದ್ದಾರೆ. ಎಂ. ರಂಗರಾವ್ ಅವರ ಸಂಗೀತ ನಿರ್ದೇಶನದಲ್ಲಿ ಹಾಡುಗಳ ಧ್ವನಿಮುದ್ರಣ ನಡೆದಿದೆ. ನಿರ್ದೇಶಕರು: ಎ. ವಿ. ಶೇಷಗಿರಿರಾವ್. ಸಾಹಿತ್ಯ – ಉದಯಶಂಕರ್. ತಾರಾಗಣದ ತಲಾಶ ಬಿರುಸಿನಿಂದ ನಡೆದಿದೆ.

* * *

**ಚಿತ್ರನಟ ರಾಜಗೋಪಾಲ್ ಅವರಿಂದ ನಾಟಕ**

ಚಿತ್ರರಂಗದಲ್ಲಿ ಈಗ ಅಯ್ಯಪ್ಪನ ಭಕ್ತಾದಿಗಳು ತುಂಬ. ಚಿತ್ರನಟ ರಾಜಗೋಪಾಲ್ ಅಯ್ಯಪ್ಪನ ಲೀಲಾ ವಿನೋದವನ್ನು ಕುರಿತು ನಾಟಕ ಗಾಯನ ಸಮಾಜದಲ್ಲಿ ಅಭಿನಯಿಸಿದ್ದಾರೆ.

* * *

**ಮಂಗಳೂರಲ್ಲಿ ಎಸ್. ಪಿ., ಜಾನಕಿ ಸಂಗೀತ ಸಂಜೆ**

ಮಂಗಳೂರು ತರಂಗಿಣಿಯ ಸಚ್ಚೀಂದ್ರನಾಥ್ ವಿವಿಧ ಕಲಾಕಾರ್ಯಕ್ರಮಗಳನ್ನೇರ್ಪಡಿಸಿ ರಸಿಕರನ್ನು ತಣಿಸುವುದರಲ್ಲಿ ಚತುರರು. ಇದೇ ತಿಂಗಳು 7ನೇ ತಾರೀಖು ಮಂಗಳೂರಲ್ಲಿ ಖ್ಯಾತ ಹಿನ್ನೆಲೆ ಗಾಯಕರಾದ ಎಸ್. ಪಿ. ಬಾಲಸುಬ್ರಹ್ಮಣ್ಯಂ, ಎಸ್. ಜಾನಕಿ ಮತ್ತು ಎಸ್. ಪಿ. ಶೈಲಜಾ ಅವರ ಅದ್ದೂರಿ ಸಂಗೀತ ಸಂಜೆ ಕಾರ್ಯಕ್ರಮವನ್ನು ಏರ್ಪಡಿಸಿದ್ದಾರೆ. ಕನ್ನಡದಲ್ಲಿ ಈಗ ಮನೆಮಾತಾಗಿರುವ ಸಂಗೀತ ನಿರ್ದೇಶಕ ಇಳೆಯರಾಜಾ ಅಲ್ಲದೆ ಪ್ರಸಿದ್ಧ ತಾರಾಮಣಿಗಳಾದ ಅಂಬರೀಷ್, ಲಕ್ಷ್ಮಿ, ಸುಂದರಕೃಷ್ಣ ಅರಸ್, ದ್ವಾರಕೀಶ್ ಮೊದಲಾದವರೂ ಕಾರ್ಯಕ್ರಮದಲ್ಲಿ ಪಾಲುಗೊಳ್ಳಲಿದ್ದಾರೆಂದು ತಿಳಿದುಬಂದಿದೆ.

* * *

–ವಿಜಯಾ, ಬೆಂಗಳೂರು ಪ್ರತಿನಿಧಿ



# ಡಾ|ರಾಜ ಸಂಮಾನ-ನೈಟ

ಕನ್ನಡ ನಾಡಿನ ಉದ್ದಗಲಕ್ಕೂ ಅಪರಿಮಿತ ಅಭಿಮಾನೀ ಬಳಗವನ್ನು ಗಳಿಸಿಕೊಂಡಿರುವ ಡಾ। ರಾಜ್‌ಕುಮಾರ್ ತೆರೆಯ ಮೇಲಿನಷ್ಟೆ, ಸಂಗೀತ ಸಂಜೆಗಳಲ್ಲೂ ಜನಮೆಚ್ಚುಗೆ ಗಳಿಸಿದವರು. ಸಂಗೀತ ಸಂಜೆಗಳ ಆದಾಯ ದತ್ತಿಯ ಮೂಲಕ ಜನಹಿತ ಕಾರ್ಯಗಳಿಗೆ ವಿನಿಯೋಗವಾಗುತ್ತದೆ ಎನ್ನುವುದು ಅವರ ಅಭಿಮಾನಿಗಳ ಪಾಲಿಗೆ ಇನ್ನೊಂದು ಹೆಮ್ಮೆ. ವಿನೀತ ನಡವಳಿಕೆಗೆ ಕಲಾ ಪ್ರತಿಭೆಯಷ್ಟೆ ಹೆಸರಾದ ರಾಜ್‌ಕುಮಾರ್ ಅವರನ್ನು ಉಡುಪಿ ಪರ್ಯಾಯದ ವೇಳೆ ಪರ್ಯಾಯ ಪೀಠಾಧ್ಯಕ್ಷರು ಸಂಮಾನಿಸಿದರು. (ಚಿತ್ರ 1 : ಡಾ। ರಾಜ್ ದಂಪತಿಗಳು,





ಲೋಹಿತ್, ಸಚಿವ ಶ್ರೀ ವೀರಪ್ಪ ಮೊಯ್ಲಿ, ರಾಜ್ಯ ಕಾಂಗ್ರೆ ಅಧ್ಯಕ್ಷ ಶ್ರೀ ಕೆ. ಟಿ. ರಾಠೋಡ್ ಮತ್ತಿತರರು), ಅದಕ್ಕೆ ಮುನ್ನಾದಿನ ಉಡುಪಿಯ ಸಂಗಮ ಕಲಾ ಸಂಸ್ಥೆ ಡಾ। ರಾಜಕುಮಾರ್ ನೈಟ್ ಏರ್ಪಡಿಸಿ ರಸಿಕರನ್ನು ರಂಜಿಸಿತು. (ಚಿತ್ರ 2 : ಸಚಿವೆ ಮನೋರಮಾ ಮಧ್ವರಾಜರಿಂದ ರಾಜ್‌ಗೆ ಸಂಗಮ ಪರವಾಗಿ ಸ್ಮರಣಿಕೆ) ಅಪಾರ ದೈವಭಕ್ತ ರಾಜ್ ಶಬರಿಮಲೆ ಯಾತ್ರೆಯಿಂದ ನೇರ ಉಡುಪಿಗೆ ಆಗಮಿಸಿದ್ದರು (ಚಿತ್ರ : 3 ಶಬರಿಮಲೆಗೆ ತೆರಳುವ ಮುನ್ನ ಬೆಂಗಳೂರಿನಲ್ಲಿ ಒಂದು ಅಯ್ಯಪ್ಪ ಸೇವಾ ಸಮಿತಿಗೆ ಭೇಟಿ ನೀಡಿ ಸ್ವಾಮಿಗೆ ನಮಸ್ಕರಿಸುತ್ತಿರುವುದು)

**ಫೋಟೋಗಳು : ಶಿರಾಲಿ,**
ವಿಶ್ವನಾಥ್ ಸುವರ್ಣ
ನಿತ್ಯಾ ಆರ್ಟ್ಸ್

ಪ್ರಮೀಳಾ ಜೋಪಾಯ್, ಶ್ರೀನಾಥ್

# ಗಣೋಡಿ ಹೆಣ್ಣುಕೊಡು



ಲೀಲಾವತಿ, ಅಶ್ವತ್ಥ್, ಶ್ರೀನಾಥ್

ಭುವನೇಶ್ವರಿ ಆರ್ಟ್ ಮೂವೀಸ್ ಲಾಂಛನದಲ್ಲಿ ಬರುತ್ತಿರುವ ವರ್ಣಚಿತ್ರ. ಈ ಬಾರಿ ಅದೇ ಮಿತ್ರ ಚತುಷ್ಟಯವಲ್ಲ. ಅಂಕಲಗಿ ಅವರೊಟ್ಟಿಗೆ ಬಿ. ಎಸ್. ಮಹೇಶ್ ಎನ್ನುವವರೂ ಸೇರಿದ್ದಾರೆ. ಇಬ್ಬರೇ ನಿರ್ಮಾಪಕರು. ಎಂದೂ ರಂಗಭೂಮಿಯತ್ತ ಒಲವು ಇರುವ ಅಂಕಲಗಿ ಅವರು ಈ ಬಾರಿಯೂ ಅಂಥ ಜನಪ್ರಿಯ ನಾಟಕವನ್ನೇ ವಸ್ತುವಾಗಿ ಆರಿಸಿದ್ದಾರಂತೆ. ಕಥೆ ಸಾಳುಂಕೆಯವರದು. ಚಿತ್ರಕಥೆ – ನಿರ್ದೇಶನ ಎ. ವಿ. ಶೇಷಗಿರಿರಾಯರದು. ಅಣ್ಣಯ್ಯ – ಮಲ್ಲಿಕ್‌ರ ಛಾಯಾಗ್ರಹಣ. ಒಂದು ಹಂತದಲ್ಲಿ ಎಲ್ಲ ತಂತ್ರಜ್ಞರೂ ಇವರ ಮೊದಲ ಸಿನಿಮಾಸ್ಕೋಪ್ ಚಿತ್ರದ ತಂಡವೇ ಎನ್ನಬಹುದು. ಎಂ. ರಂಗರಾವ್ ಅವರ ಸಂಗೀತವಿದೆ. ಆರ್. ಎನ್. ಜಯಗೋಪಾಲ್, ದೊಡ್ಡರಂಗೇಗೌಡ, ಶಾಮಸುಂದರ ಕುಲಕರ್ಣಿ ಅವರುಗಳು ಹಾಡುಗಳನ್ನು ಬರೆದಿದ್ದಾರೆ. ಧ್ವನಿ ಸಂಯೋಜನೆ ಸೊಗಸಾಗಿದೆ ಅನ್ನಿಸಿದೆ ಹಾಡುಗಳ ಧ್ವನಿ ಮುದ್ರಿಕೆ ಕೇಳಿದಾಗ. ಇನ್ನು ದೃಶ್ಯೀಕರಣ ತೆರೆಕಂಡ ಮೇಲೆ ತಿಳಿಯಬೇಕಷ್ಟೆ. ಸಂಭಾಷಣೆ ಉದಯಶಂಕರ್. ಕಲಾನಿರ್ದೇಶಕರು ಕೇಶವರಾವ್. ನೃತ್ಯ ಉಡುಪಿ ಜಯರಾಂ – ಸಾಹಸ ಸುಬ್ಬಯ್ಯ ನಿರ್ವಹಿಸಿದ್ದಾರೆ.

ಉತ್ತಮ ಕೆಲಸಗಾರನೆಂದು ಹೆಸರಾಂತ ಎಸ್. ಪಿ. ಎನ್. ಕೃಷ್ಣ ಅವರು ಈ ಚಿತ್ರದ ಸಂಕಲನಕಾರ. ಈತ ಹಿಂದೆ ಎಡಕಲ್ಲು, ಕರುಳಿನ ಕರೆ ಮುಂತಾದ ಚಿತ್ರಗಳಿಗೆ


ಮಂಜುಳಾ, ಬಾಲಕೃಷ್ಣ


ಜೈಜಗದೀಶ್, ಪ್ರಮಿಳಾ ಜೋಪಾಯ್


ಶ್ರೀನಾಥ್, ಮಂಜುಳಾ

ಕೆಲಸ ಮಾಡಿದ್ದರು. ಅನೇಕ ಪ್ರಶಸ್ತಿಗಳೂ ಬಂದಿವೆ. ಜನ್ಮರಹಸ್ಯ ಚಿತ್ರಕ್ಕೆ ನಿರ್ದೇಶಕರೂ ಆಗಿದ್ದರು.

ಚೆಟ್ಟದ ಹಲಸೂರು – ಬೆಂಗಳೂರಿನ ಸುತ್ತಮುತ್ತ ಚಿತ್ರೀಕರಣ ನಡೆದಿದೆ. ಚಾಮುಂಡೇಶ್ವರಿಯಲ್ಲಿ 3 ದಿನ ಮಾತ್ರ ಗ್ರಾಮೀಣ ಹಿನ್ನೆಲೆಯ ಸೆಟ್ ನಿರ್ಮಿಸಿ ಚಿತ್ರೀಕರಿಸಲಾಗಿತ್ತು.

ವಿಶೇಷ ಎನ್ನಲಾದ 'ಡಿಸ್ಕೊ' ಮಾದರಿಯ ಗೀತೆಯೊಂದಕ್ಕೆ ಶ್ರೀನಾಥ್ ಪ್ರಮಿಳಾ ಜೋಪಾಯ್ ಮೊದಲಾಗಿ ಇತರರು ಭಾಗವಹಿಸಿ ನರ್ತಿಸಿದ್ದಾರೆನ್ನಲಾಗಿದೆ.

ಬಾಲಕೃಷ್ಣ ಚೆಟ್ಟದ ಹಲಸೂರಿನ ಶಾಲೆಯ ನೆರವಿಗೆ ಹೋಗಿ – ಸಮಾಜ ಸುಧಾರಣೆ ಮಾಡಿದ ಪಾಪಕ್ಕೆ ಲಾಯರ್ ನೋಟೀಸ್ ಪಡೆದದ್ದು ಈ ಚಿತ್ರದ ಚಿತ್ರೀಕರಣದ ಸಮಯದಲ್ಲೇ.

ಈ ಚಿತ್ರದಲ್ಲಿ ಅವರು ವಿಶೇಷ ರೀತಿಯಲ್ಲಿ 'ಹೊಡೆದಾಡಿ'ದ್ದಾರೆಂಬುದೊಂದು ಕುತೂಹಲದ ವಿಚಾರ.


ಬಿ. ಕೆ. ಶಂಕರ್, ಜಯಲಕ್ಷ್ಮಿ, ಹೂಗಾರ್

ಶ್ರೀನಾಥ್, ಮಂಜುಳಾ, ಜೈಜಗದೀಶ್, ಪ್ರಮಿಳಾ ಜೋಪಾಯ್, ಇಂದ್ರಜಿತ್, ಬಾಲಕೃಷ್ಣ, ಅಶ್ವತ್ಥ್, ಲೀಲಾವತಿ, ಬಿ. ಕೆ. ಶಂಕರ್, (ಹೊಸ ಹುಡುಗಿ) ಜಯಲಕ್ಷ್ಮಿ, ಹೂಗಾರ್, ಉಮಾಶಿವಕುಮಾರ್, ಗುಗ್ಗು ಮೊದಲಾದವರು ಅಭಿನಯಿಸಿದ್ದಾರೆ. ಅವರೂ ಕಥಾ ಫಾರ್ಮುಲಾದಂತೆ ಇದೂ ಹೆಂಗರುಳ ಕಲಕುವ ಭಾಗವೇ!

ವಿಜಯ ಪಿಕ್ಚರ್ಸ್‌ನವರು ಈ ಚಿತ್ರವನ್ನು ವಿತರಣೆ ಮಾಡಲಿದ್ದಾರೆ.

ಚಿತ್ರ ಬಿಡುಗಡೆ ಇದೇ ತಿಂಗಳು! ●



# ಹಿರಿಯರ ನುಡಿಮುತ್ತುಗಳು ಸಾಮಾನ್ಯನಿಗೂ ತಲುಪಬೇಕು — ಚಿ/ಉದಯಶಂಕರ

ಸಂದರ್ಶನ : ಎಸ್. ಜಯಸಿಂಹ

ಸುಮಾರು ಹದಿನಾರು ವರುಷಗಳ ಅವಧಿಯಲ್ಲಿ ನೂರರವತ್ತಕ್ಕೂ ಹೆಚ್ಚಿನ ಚಿತ್ರಗಳಿಗೆ ಸಾಹಿತ್ಯವನ್ನು ನೀಡಿ ಸದ್ಯದಲ್ಲಿಯೇ 'ದ್ವಿಶತಚಿತ್ರ ಸಾಹಿತಿ' ಎಂದೆನಿಸಿಕೊಳ್ಳುವ ಭಾಗ್ಯವೂ ಕನ್ನಡಿಗ ಸಾಹಿತಿಯೊಬ್ಬರ ಪಾಲಿಗಿದೆ ಎಂದರೆ ಆಶ್ಚರ್ಯವಾಗುವುದಿಲ್ಲವೇ....!

ಈ ಸಾಧನೆಯನ್ನು ಇಂದಿನ ಕನ್ನಡ ಚಲನಚಿತ್ರರಂಗದ ಅತ್ಯಂತ ಜನಾನುರಾಗಿ ಸಾಹಿತಿಯೆಂದೆನಿಸಿಕೊಂಡಿರುವ ಚಿ. ಉದಯಶಂಕರ್ ಅವರು ಸಾಧಿಸಿ ಇಡೀ ಭಾರತೀಯ ಚಿತ್ರರಂಗದಲ್ಲೇ ದಾಖಲೆ ಸ್ಥಾಪಿಸಿದ್ದಾರೆನ್ನಬಹುದಾಗಿದೆ.

ಲೇಖನ ಕಲೆ ಉದಯಶಂಕರ್ ಅವರಿಗೆ ಬಾಲ್ಯದಿಂದ ಅಂಟಿಬಂದ ಗೀಳು. ವಂಶ ಪಾರಂಪರ್ಯವಾಗಿ ಬಂದ ಬಳುವಳಿ. ಗುಬ್ಬಿ ತಾಲ್ಲೂಕಿಗೆ ಸೇರಿದ ಚಿಟ್ಟನಹಳ್ಳಿ ಇವರ ಸ್ಥಳ. ನಾಲ್ಕು ದಶಕಗಳನ್ನು ದಾಟಿರುವ ಉದಯಶಂಕರ್ ಅವರ ತಾತ ಶ್ರೀಕಂಠಯ್ಯನವರು ಪರಿಶುದ್ಧ ದೈವಭಕ್ತರು, ಆಶುಕವಿಗಳು. ಇವರ ಹಿರಿಯ ಮಗ ಮಹದೇವಯ್ಯ ತಂದೆ ಬರೆದ 'ಗೀತ ರತ್ನಾಕರ'ವೆಂಬ ಗ್ರಂಥದ ಪ್ರಕಾಶಕರೂ ಹೌದು. ಇನ್ನು ಇವರ ತಂದೆ ಚಿ. ಸದಾಶಿವಯ್ಯ ಕನ್ನಡ ಚಿತ್ರರಸಿಕರೆಲ್ಲರಿಗೂ ಪರಿಚಯದ ವ್ಯಕ್ತಿಯೇ ಆಗಿದ್ದಾರೆ. ಇಷ್ಟೇ ಅಲ್ಲದೆ ತಾತ, ಮಗ, ಮೊಮ್ಮಗ ಮೂವರೂ ಅಧ್ಯಾಪಕ ವೃತ್ತಿಯಲ್ಲಿದ್ದವರು ಎಂಬುದೂ ಇವರ ಜೀವನದ ಪ್ರಮುಖ ಅಂಶಗಳಲ್ಲೊಂದೆನ್ನಬಹುದು.

ಉದಯಶಂಕರ್ ಅವರ ಸಾಹಿತ್ಯಕೃಷಿ ಆರಂಭವಾದುದು ಶಿಶುಸಾಹಿತ್ಯದ ಮೂಲಕ. 'ಮಕ್ಕಳ ಕೂಟ'ದಿಂದ ಪ್ರಕಟವಾಗುತ್ತಿದ್ದ 'ಮಕ್ಕಳ ಬಾವುಟ'ದ ಸಂಪಾದಕ ವೃತ್ತಿ; ಹತ್ತಿರದಲ್ಲಿದ್ದ ಕನ್ನಡ ಸಾಹಿತ್ಯ ಪರಿಷತ್ತಿಗೆ ಆಗಾಗ್ಗೆ ಭೇಟಿ; ಬೇಂದ್ರೆ, ದೇವುಡು, ತಿ. ತಾ. ಶರ್ಮ ಮುಂತಾದ ಹಿರಿಯರ ಆಶೀರ್ವಚನ, ಪ್ರೋತ್ಸಾಹದ ನುಡಿ, ಸ್ವಲ್ಪ ಮುನ್ನುಗ್ಗಿ ಕಾದಂಬರಿ ರಚನೆಯಲ್ಲೂ ಕೈಯಾಡಿಸಿದ ನಂತರ ಚಿತ್ರನಟನಾಗಿ ಚಿತ್ರರಂಗವನ್ನು ಪ್ರವೇಶಿಸಿದರು ಉದಯಶಂಕರ್.

ಬಿ. ಆರ್. ಪಂತುಲು ಅವರ 'ಮೊದಲ ತೇದಿ' ಚಿತ್ರಕ್ಕೆ ತಂದೆಯವರೊಂದಿಗೆ ಸಾಹಿತ್ಯ ಸಹಾಯಕರಾಗಿ ದುಡಿದು ಹಲವಾರು ಕಾಲ ಕೆಲವಾರು ಬಗೆಯ ಕಷ್ಟಗಳನ್ನನುಭವಿಸಿದ ನಂತರ ಉದಯಶಂಕರ್ ಸ್ವತಂತ್ರ ಚಿತ್ರಸಾಹಿತಿಯಾದರು. ಚಿತ್ರಸಾಹಿತಿಯಾಗೇ ಅಲ್ಲದೆ ಗೀತರಚನಕಾರರಾಗಿಯೂ ಉದಯಶಂಕರ್ ಕರ್ನಾಟಕದಲ್ಲಿ ಮನೆಮಾತಿನ ವ್ಯಕ್ತಿಯಾಗಿ ಹೆಸರು ಗಳಿಸಿದ್ದಾರೆ.

ನಂತರ ಉದಯಶಂಕರ್ ಅವರ ಪಾಲಿಗೆ ಬಂದ ಚಿತ್ರಗಳು ಲೆಕ್ಕವಿಲ್ಲದಷ್ಟು ಅವರಿಗೆ ಬಿಡುವಿಲ್ಲದಷ್ಟು. ಐವತ್ತು ಚಿತ್ರಗಳಿಗೆ ಸಾಹಿತ್ಯ ನೀಡಿದ ಸಂದರ್ಭದಲ್ಲಿ "ಸಾಹಿತ್ಯರತ್ನ" ಎಂಬ ಪ್ರಶಸ್ತಿಯನ್ನು ಚಿತ್ರಪ್ರೇಮಿಗಳಿಂದ ಪಡೆದಿರುವ ಚಿ. ಉದಯಶಂಕರ್ ಅತ್ಯುತ್ತಮ ಸಂಭಾಷಣೆ ರಚನೆಗಾಗಿ "ದೇವರಗುಡಿ" ಹಾಗೂ "ಬಯಲುದಾರಿ" ಚಿತ್ರಗಳಿಂದ 1975 ಮತ್ತು 1976ರಲ್ಲಿ ಕ್ರಮವಾಗಿ 'ಲಾವಣ್ಯ' ಚಿತ್ರಪ್ರಶಸ್ತಿಯನ್ನೂ ಗಳಿಸಿದ್ದಾರೆ.

ನಿತ್ಯಜೀವನದ ಅನುಭವಗಳನ್ನು ಬುಗ್ಗೆ ಬುಗ್ಗೆಯಾಗಿ ಅತ್ಯಂತ ಸುಲಭ ಭಾಷೆಯಲ್ಲಿ ನೀಡುವ ಉದಯಶಂಕರ್ ಅವರ ಅನೇಕ ರಚನೆಗಳು ರುಚಿ, ಪರಿಶ್ರಮ, ಸ್ವಾರಸ್ಯ ಹಾಗೂ ಭವ್ಯತೆಗಳ ಮಿಶ್ರಣದಿಂದಾದ ಸಾಹಿತ್ಯ ರಸಪಾಕವಾಗಿದೆ.



● ಒಂದು ಚಿತ್ರದ ಚಿತ್ರಕಥೆ ಹಾಗೂ ಸಂಭಾಷಣೆಗಳನ್ನು ರಚಿಸಲು ಸಾಮಾನ್ಯವಾಗಿ ಎಷ್ಟು ಕಾಲ ಆಗಬಹುದು?

ಸಾಮಾನ್ಯವಾಗಿ ಇದು ನಿರ್ಮಾಪಕ-ನಿರ್ದೇಶಕರು ಆರಿಸಿರುವ ಮೂಲಕಥೆಯನ್ನು ಅವಲಂಬಿಸಿರುತ್ತದೆ. ಚಿತ್ರವು ಪೌರಾಣಿಕ ಹಾಗೂ ಐತಿಹಾಸಿಕ ಕಥೆಯನ್ನು ಹೊಂದಿದ್ದರೆ ಸಂಭಾಷಣೆ ರಚಿಸುವವ ಅದಕ್ಕೆ ಸಂಬಂಧಪಟ್ಟ ಗ್ರಂಥಗಳನ್ನು ಪರಿಶೀಲಿಸಿ ಮೂಲ ಘಟನೆಗೆ ಯಾವುದೇ ರೀತಿಯ ಅಪಚಾರವೂ ಆಗದಂತೆ ಗಮನವಿಟ್ಟು ಒಂದೊಂದು ವಾಕ್ಯವನ್ನೂ ಬರೆಯಬೇಕಾಗುತ್ತದೆ. ಆದ್ದರಿಂದ ಇದಕ್ಕೆ ಹೆಚ್ಚು ಸಮಯ ಬೇಕಾಗಬಹುದು (ಅಂದಾಜು: 2 ತಿಂಗಳು). ಚಿತ್ರವು ಸಾಮಾಜಿಕ ಕಾದಂಬರಿಯೊಂದರ ಆಧಾರಿತವಾಗಿದ್ದರೆ ಕಾದಂಬರಿ ಬರೆದವರ ಹತ್ತಿರ ಚರ್ಚಿಸಿ ಚಿತ್ರಕ್ಕಾಗಿ ಮಾಡಿಕೊಳ್ಳುವ ಬದಲಾವಣೆಗಳ ಬಗ್ಗೆ ಅವರ ಅನುಮತಿ ಪಡೆದು ಚಿತ್ರಕಥೆಯನ್ನು ರಚಿಸುತ್ತೇವೆ. ಇಂಥ ಚಿತ್ರಗಳ ಕಾರ್ಯಕ್ಕೆ ನಮಗೆ ಅಂದಾಜು 1½ ತಿಂಗಳು ಹಿಡಿಯಬಹುದು. ಇತರ ಬಗೆಯ ಚಿತ್ರಗಳಿಗೆ ಹೆಚ್ಚೆಂದರೆ ಒಂದು ತಿಂಗಳಾಗಬಹುದು. ತಾಂತ್ರಿಕವಾಗಿ ಹೇಳುವುದಾದರೆ ಇಷ್ಟು ದಿನವೆಂದು ನಿಗದಿ ಮಾಡಿ ಸತತವಾಗಿ ಚಿತ್ರಕಥೆ ಮತ್ತು ಸಂಭಾಷಣೆಗಳನ್ನು ರಚಿಸುವ ಅವಕಾಶ ಶೇ. 80ರಷ್ಟು ಚಿತ್ರಗಳಿಗೆ ಸಿಗುವುದಿಲ್ಲ. ಏಕೆಂದರೆ ಈ ಕಾರ್ಯದಲ್ಲಿ ಚಿತ್ರದಲ್ಲಿ ನಿರ್ದೇಶಕರು, ಸಹನಿರ್ದೇಶಕರು ಭಾಗಿಗಳಾಗಿರಬೇಕಾಗುತ್ತದೆ. ಅವರಿಗಿರುವ ಸಮಯವನ್ನೂ ಈ ಕಾರ್ಯ ಅವಲಂಬಿಸಿರುತ್ತದೆ.

● ಚಿತ್ರಕಥೆ ಮತ್ತು ಸಂಭಾಷಣೆ ರಚನೆಯಲ್ಲಿ ಅನುಸರಿಸಲಾಗುವ ಕ್ರಮವನ್ನು ವಿವರಿಸುವಿರಾ?

ನಿರ್ದೇಶಕರು (ಒಮ್ಮೊಮ್ಮೆ ಸಹ ನಿರ್ದೇಶಕರು) ತಮ್ಮ ಚಿತ್ರದ ಕಥೆಯನ್ನು ಸೂಕ್ಷ್ಮವಾಗಿ ಹೇಳಿ ತಾವು ರೂಪಿಸಿಕೊಂಡಿರುವ ನಿರೂಪಣಾ ಕ್ರಮವನ್ನು ನಮಗೆ ಹೇಳುತ್ತಾರೆ. ಅದರ ಆಧಾರದ ಮೇಲೆ ನಾವು ಚಿತ್ರಕಥೆ ಹಾಗೂ ಸಂಭಾಷಣೆಯನ್ನು ನಮ್ಮ ಕಲ್ಪನೆಯ ರೀತ್ಯ ರಚಿಸಿ ಸಿದ್ಧಪಡಿಸುತ್ತೇವೆ. ಅನಂತರ ನಿರ್ದೇಶಕರಿಗೆ ಎರಡು-ಮೂರು ಬಾರಿ ಅದರ 'ರೀಡಿಂಗ್' ಕೊಡುತ್ತೇವೆ. ನಿರ್ದೇಶಕರೇನಾದರೂ ಬದಲಾವಣೆಗಳನ್ನು ಸೂಚಿಸಿದಲ್ಲಿ ಅದರಂತೆ ಸಂಭಾಷಣೆಗಳನ್ನು ಪರಿಷ್ಕರಿಸಿ ಪೂರ್ಣವಾದ ಸಿದ್ಧ ಪ್ರತಿಯನ್ನು ಅವರಿಗೆ ಕೊಟ್ಟುಬಿಡುತ್ತೇವೆ. ಮುಂದಿನದೇನಿದ್ದರೂ ನಿರ್ದೇಶಕ ಸಹನಿರ್ದೇಶಕರ ಕೆಲಸ. ಚಿತ್ರೀಕರಣದ ವೇಳೆಯಲ್ಲಿ ಕೆಲವು ವೇಳೆ ಸಂಭಾಷಣೆಗಳನ್ನು ಬದಲಿಸಬೇಕಾದ ಸಂದರ್ಭ ಬರಬಹುದು. ಅವು ಚಿಕ್ಕಪುಟ್ಟ ಬದಲಾವಣೆಯಾಗಿದ್ದರೆ ನಿರ್ದೇಶಕರೇ ಮಾಡಿಕೊಳ್ಳುತ್ತಾರೆ, ದೊಡ್ಡದಾದರೆ ನಮ್ಮನ್ನೇ ಮತ್ತೆ ಕರೆಸಿ ಮತ್ತೆ ಬರೆಸುತ್ತಾರೆ.

● ಹಿಂದಿನ ಹಾಗೂ ಈಗಿನ ಸಂಭಾಷಣೆಯ ರಚನಾಕ್ರಮದಲ್ಲಿ ಆಗಿರುವ ಗಮನಾರ್ಹ ಬದಲಾವಣೆಯೇನು?

ಉದ್ದುದ್ದ ಸಂಭಾಷಣೆಗಳನ್ನು ರಚಿಸುತ್ತಿದ್ದ ಸಮಯ ಒಂದಿತ್ತು. ಕಾಲ ಬದಲಾಗುತ್ತಾ ಬಂದಂತೆ ಜನಗಳೂ ಬದಲಾಗುತ್ತಿರುತ್ತಾರಲ್ಲವೇ. ಅಂತೆಯೇ ಈಗೀಗ ಚಿಕ್ಕ ಚಿಕ್ಕ ಸಂಭಾಷಣೆಗಳನ್ನು ರಚಿಸಲು ನಾವು ಹೆಚ್ಚು ಉತ್ಸಾಹ ತೋರಿಸುತ್ತೇವೆ. ಕಾರಣ – ಚಿಕ್ಕ ಚಿಕ್ಕ ಸಂಭಾಷಣೆಗಳು ಜನಮನವನ್ನು ಬಹುಬೇಗ ತಲುಪುವ ಸಾಧ್ಯತೆ ಇರುವುದರಿಂದ.

● ಚಿತ್ರರಂಗದಲ್ಲಿ ಸಾಹಿತ್ಯ ವಿಭಾಗವನ್ನೇ ಆರಿಸಿದ್ದು ಹೇಗೆ?

ತಂದೆ ಮದರಾಸಿಗೆ ಕರೆಸಿ, ಅವರಿಗೆ ಸಹಾಯಕನಾಗಿ ನೇಮಿಸಿಕೊಂಡರು. ನಟನಾಗಬೇಕು, ಗಾಯಕನಾಗಬೇಕು ಎಂಬ ಆಸೆ ನನಗೆ ಬಹಳವಿತ್ತು. ಈ ಆಸೆ ಆಗಾಗ ನೆರವೇರಿದುದೂ ಉಂಟು. ಕಲಾವಿಭಾಗದಲ್ಲಿಯೂ ಕೆಲಕಾಲ ಕಾರ್ಯ ನಿರ್ವಹಿಸಿದ ನಂತರ ಹಲವರಿಗೆ ಸಹಾಯಕ ನಿರ್ದೇಶಕನೂ ಆದೆ. ಹೀಗೇ ಎಂಟು ವರ್ಷಗಳು ಕಳೆದನಂತರ ನನ್ನನ್ನು ಕರೆದು – "ಶಂಕ್ರೂ, ಇಷ್ಟು ದಿನ ನೀನು ಬೇರೆ ಬೇರೆ ವಿಭಾಗಗಳ ಕೆಲಸ ಮಾಡಿ ಅನುಭವ ಪಡೆದು ಒಂದು ಸ್ಥಿತಿಗೆ ಬಂದಿದ್ದೀಯೆ. ಕಳೆದುಹೋದ ದಿನ ಮತ್ತು ವಯಸ್ಸು ಮತ್ತೆ ಬರೋದಿಲ್ಲ. ಜೀವನದಲ್ಲಿ ನೀನೇನು ಆಗಬೇಕೆಂದು ಬಯಸಿದ್ದೆಯೋ ಅದನ್ನು ಆರಿಸಿಕೊಳ್ಳಲು ಇದೇ ಸಮಯ. ನಿನಗೆ ಒಗ್ಗುವ ಒಂದು ವಿಭಾಗವನ್ನು ಆರಿಸಿಕೊಂಡು ಅದನ್ನೇ ಭದ್ರ ಮಾಡಿಕೊಂಡು ಶ್ರಮಿಸಿ ಅದರಲ್ಲೇ ಮುಂದುವರಿ" ಎಂದು ಬುದ್ಧಿಮಾತು ಹೇಳಿದರು. ಕೆಲದಿನಗಳ ಸುದೀರ್ಘ ಯೋಚನೆಯ ನಂತರ ತಂದೆಯವರ ವೃತ್ತಿಯನ್ನೇ ಮುಂದುವರಿಸಲು ನಿರ್ಧರಿಸಿ ಸಾಹಿತ್ಯ ವಿಭಾಗವನ್ನು ಆರಿಸಿದೆ.

● ನೀವು ಸ್ವತಂತ್ರವಾಗಿ ಪೂರ್ಣ ಪ್ರಮಾಣದ ಚಿತ್ರಸಾಹಿತಿಯಾಗಿದ್ದು ಯಾವ ಚಿತ್ರದ ಮೂಲಕ?

## ಉದಯಶಂಕರ್‌ಗೆ ಪಿತೃವಿಯೋಗ

ಕನ್ನಡ ಚಿತ್ರರಂಗದ ಆದ್ಯ ಚಿತ್ರಸಾಹಿತಿಗಳಲ್ಲಿ ಒಬ್ಬರಾದ ಚಿ। ಸದಾಶಿವಯ್ಯ ಇತ್ತೀಚಿಗೆ ಮದ್ರಾಸಿನಲ್ಲಿ ನಿಧನರಾದರು. ಬೆಂಗಳೂರಿನ ಪ್ರಖ್ಯಾತ ನ್ಯಾಷನಲ್ ಕಾಲೇಜಿನಲ್ಲಿ ಶಿಕ್ಷಕರಾಗಿದ್ದ ಅವರು ಅತ್ಯಂತ ಜನಪ್ರಿಯರಾಗಿದ್ದು ಎಲ್ಲರಿಗೂ 'ಮೇಷ್ಟ್ರು' ಆಗಿದ್ದರು. ಅಧ್ಯಾಪನ ವೃತ್ತಿಯ ಅನಂತರ ಚಿತ್ರರಂಗ ಪ್ರವೇಶಿಸಿ ಉತ್ತಮ ಸಾಹಿತ್ಯ, ವಿಶ್ವಾಸದ ನಡವಳಿಕೆಯಿಂದ ಅಲ್ಲೂ ಎಲ್ಲರ ವಿಶ್ವಾಸಪಾತ್ರ 'ಮೇಷ್ಟ್ರೇ' ಆದರು. ಮುಂದೆ ಮದ್ರಾಸಿಗೆ ತೆರಳಿದ ಅವರು 'ವಿಜಯಚಿತ್ರ' ಸಿನಿಮಾ ಮಾಸಪತ್ರಿಕೆಯ ಸಹಾಯಕ ಸಂಪಾದಕರಾಗಿ ಕೊನೆಯ ವರೆಗೂ ದುಡಿದರು. ನಿಧನ ಕಾಲಕ್ಕೆ ಅವರಿಗೆ 75 ವರ್ಷ ಪ್ರಾಯವಾಗಿತ್ತು. ಚಿ। ಉದಯಶಂಕರ್ ಮತ್ತು ಈಗ ನಿರ್ದೇಶಕನಾಗಿ ಹೆಸರು ಗಳಿಸಿರುವ ಚಿ। ದತ್ತುರಾಜ್ ಅವರ ಮಕ್ಕಳು.

ನನ್ನ ಸ್ವತಂತ್ರ ಬರವಣಿಗೆಯನ್ನು ಹೊಂದಿದ ಮೊದಲ ಚಿತ್ರ – 'ಸಂತ ತುಕಾರಾಂ' ಎಂಬ ಪ್ರಚಾರವಿದೆ. ಆದರೆ ನಿಜವಾಗಿ ಆ ಚಿತ್ರದ ಸಂಭಾಷಣೆಗಳನ್ನು ಬರೆದವರು ನಮ್ಮ ತಂದೆಯವರು. ಆ ಚಿತ್ರಕ್ಕೆ ನಾನು ಸಹ ನಿರ್ದೇಶಕನಾಗಿದ್ದನಾದ್ದರಿಂದ ಅನೇಕ ಬಾರಿ ಸಂದರ್ಭಕ್ಕನುಗುಣವಾಗಿ ನಮ್ಮ ತಂದೆ ಬರೆದಿದ್ದ ಸಂಭಾಷಣೆಗಳನ್ನು ಪುನರ್ರಚಿಸಿದೆ. 'ಸಾಹಿತ್ಯ ವಿಭಾಗದಲ್ಲಿ ನನ್ನ ಮಗನ ಕಾರ್ಯವೇ ಹೆಚ್ಚಾಗಿದೆ, ಆದ್ದರಿಂದ ಟೈಟಲ್ ಕಾರ್ಡ್‌ನಲ್ಲಿ ಅವನ ಹೆಸರೇ ಹಾಕಿ'– ಎಂದು ನಮ್ಮ ತಂದೆ ಚಿತ್ರ ನಿರ್ಮಾಪಕರನ್ನು ಕೇಳಿದಾಗ ಅವರು ಒಪ್ಪಿ ಹಾಗೆಯೇ ಮಾಡಿದರು.

ನನ್ನ ಸ್ವತಂತ್ರ ವೃತ್ತಿಯ ಇಚ್ಛೆಯನ್ನು ಅರಿತು ಆದರಿಸಿ ಮೊದಲು ನನ್ನಲ್ಲಿ ಉತ್ಸಾಹ ತುಂಬಿ ಪ್ರೋತ್ಸಾಹಿಸಿದವರು ಇಂದು ಕನ್ನಡ ಚಿತ್ರಬ್ರಹ್ಮರೆನಿಸಿರುವ ಬಿ. ಎಸ್. ರಂಗ ಅವರು. ವಿಕ್ರಂ ಪ್ರೊಡಕ್ಷನ್ಸ್ ಲಾಂಛನದಲ್ಲಿ ಅವರು ನಿರ್ಮಿಸಿ 1964ರಲ್ಲಿ ಬಿಡುಗಡೆ ಮಾಡಿದ "ಮಹಾಸತಿ ಅನಸೂಯ" ನನ್ನ ಚಿತ್ರಕಥೆ ಮತ್ತು ಸಂಭಾಷಣೆಯನ್ನು ಹೊಂದಿದ್ದ ಮೊದಲ ಚಿತ್ರ.

**● ಇತ್ತೀಚಿನ ಹಲವು ವರ್ಷಗಳಿಂದ ಕಾದಂಬರಿ ಹಾಗೂ ಸಣ್ಣ ಕಥೆಗಳ ಆಧಾರದ ಮೇಲೆ ಚಿತ್ರಗಳು ರೂಪಿತವಾಗುತ್ತಿರುವುದು ಮತ್ತು ಅವು ಬಹಳಷ್ಟು ಪರಿಣಾಮವನ್ನು ತಂದಿರುವುದು ಸರ್ವವಿದಿತ. ಈ ಬಗೆಯ ಚಿತ್ರಗಳಿಗೆ ಸಂಭಾಷಣೆ ಬರೆಯುವಾಗ ಬೇರೆ ಕ್ರಮವೇನಾದರೂ ಉಂಟೇ?**

ಸಂಭಾಷಣೆ ರಚಿಸುವ ಕ್ರಮ ಒಂದೇ. ಆದರೆ ಮೂಲ ಕಾದಂಬರಿಯಲ್ಲಿರ ಬಹುದಾದ ಹಲವು ಉತ್ತಮ ಅಥವಾ ಪರಿಣಾಮಕಾರಿ ಸಂಭಾಷಣೆಗಳನ್ನು ಮಾತ್ರ ಸಂದರ್ಭಕ್ಕನುಸಾರ ಹಾಗೆಯೇ ಉಪಯೋಗಿಸುತ್ತೇವೆ.

**● ಸಾಹಿತ್ಯಕೃತಿ ಮತ್ತು ಸಿನಿಮಾ – ಈ ಬಗ್ಗೆ ನಿಮ್ಮ ಅಭಿಪ್ರಾಯ?**

ನಮ್ಮ ಕನ್ನಡದ ಅನೇಕ ಜನಪ್ರಿಯ ಕಾದಂಬರಿಗಳು ಚಿತ್ರರೂಪ ತಾಳಿ ಚಿತ್ರ ರಂಗವನ್ನು ಗಮನಾರ್ಹ ರೀತಿಯಲ್ಲಿ ಮೇಲಕ್ಕೇರಿಸಿವೆ ಎಂಬುದರಲ್ಲಿ ಸಂಶಯವೇ ಇಲ್ಲ. ಇಲ್ಲಿ ಕೆಲವು ಕುತೂಹಲಕಾರಿ ಘಟನೆಗಳೂ ನಡೆದಿವೆ.

ಮೂರು ಕಾದಂಬರಿಗಳ ಆಧಾರಿತವಾಗಿ 'ನಾಗರ ಹಾವು' ಚಿತ್ರ ಮೂಡಿ ಬಂದಿತು. ಕೆಲವೇ ಪುಟಗಳ ಕಥೆಗಳಾದ ಬೂತಯ್ಯನ ಮಗ ಅಯ್ಯು, ನಾ ನಿನ್ನ ಮರೆಯಲಾರೆ, ಶುಭಮಂಗಳ, ಚಂದನದ ಗೊಂಬೆ ಮುಂತಾದುವು ಬೃಹತ್ ಚಿತ್ರಗಳಾದುವು. ಮೂರು ಸಣ್ಣ ಕಥೆಗಳು 'ಕಥಾ ಸಂಗಮ'ವಾದುವು. ಹೀಗೆ ಹತ್ತು ಪುಟಗಳಲ್ಲಿ ಮೂಲ ಕಾದಂಬರಿಕಾರ ವರ್ಣಿಸಿರುವ ಒಂದು ಮನೆಯ ದೃಶ್ಯ ಅಥವಾ ಇನ್ನಾವುದೇ ದೃಶ್ಯ ಕೇವಲ ಎರಡು ನಿಮಿಷದಲ್ಲಿ ಪ್ರೇಕ್ಷಕನಿಗೆ ತಲುಪುವಂತೆ ಮಾಡುವ ಚಾಕಚಕ್ಯತೆ ಸಿನಿಮಾದಲ್ಲಿದೆ. ಕಾದಂಬರಿಯ ಹಲವಾರು ದೃಶ್ಯಗಳ ಸಾರ ಇಲ್ಲಿ ಒಂದು ದೃಶ್ಯವಾಗಿ ಮಾರ್ಪಡಬಹುದು, ಅಥವಾ ಕೇವಲ ಒಂದು ಹಾಡಿನಲ್ಲಿ ಮುಕ್ತಾಯವಾಗಬಹುದು (ಉದಾ: 'ನಾಗರಹಾವು' ಚಿತ್ರದಲ್ಲಿ ಅಲಮೇಲು ಹಾಡುವ 'ಕಥೆ ಹೇಳುವೆ ನನ್ನ ಕಥೆ ಹೇಳುವೆ' ಹಾಡಿನ ಪ್ರಸಂಗ.)

**● ನೀವು ಚಿತ್ರಕ್ಕಾಗಿ ಬರೆದ ಮೊದಲಗೀತೆಯ ವಿವರವನ್ನು ತಿಳಿಸುವಿರಾ?**

ಕವನಗಳನ್ನು ರಚಿಸುವ ಹವ್ಯಾಸ ನನಗೆ ಬಹಳ ದಿನಗಳಿಂದ ಇತ್ತು– ಹೀಗೆ ರಚಿಸಿದ್ದ ಕವನಗಳ ಪೈಕಿ "ಮನಮೋಹಿನಿ ಸರಿಸೆಯಾ ನಾಚಿಕೆಯಾ ತೆರೆಯಾ" ಎಂದು ಆರಂಭವಾಗುವ ಕವನವೊಂದನ್ನು ನನ್ನ ಮಿತ್ರ ಕೌಂಡಿನ್ಯ ಅವರು ತಮ್ಮ "ಶಿವರಾತ್ರಿ ಮಹಾತ್ಮೆ" ಎಂಬ ಚಿತ್ರಕ್ಕೆ ಆಯ್ಕೆ ಮಾಡಿದರು. 1964ರಲ್ಲಿ ತೆರೆಕಂಡ ಈ ಚಿತ್ರದ ಈ ಗೀತೆಯನ್ನು ರಾಜಕುಮಾರ್ ಅವರಿಗಾಗಿ ಪಿ. ಬಿ. ಶ್ರೀನಿವಾಸ್ ಹಾಡಿದ್ದರು. ನನ್ನಿಂದ ರಚಿತವಾಗಿ ಚಿತ್ರಕ್ಕೆ ಅಳವಡಿಸಲ್ಪಟ್ಟ ಮೊದಲ ಗೀತೆಯೇ ಇದು.

**● ಚಿತ್ರವೊಂದಕ್ಕೆ ನೀವು ಗೀತೆಯನ್ನು ರಚಿಸುವ ಕ್ರಮವನ್ನು ತಿಳಿಸಿ?**

ಸಾಮಾನ್ಯವಾಗಿ ಚಿತ್ರದ ನಿರ್ದೇಶಕರು ಸಂಗೀತ ನಿರ್ದೇಶಕರೊಂದಿಗೆ ಮೊದಲು ಗೀತೆಯು ಚಿತ್ರದಲ್ಲಿ ಬರುವ ಸಂದರ್ಭ, ಗೀತೆಯನ್ನು ಚಿತ್ರದಲ್ಲಿ ಹೇಳುವ ಪಾತ್ರಗಳ ಬಗ್ಗೆ ವಿವರಣೆ ನೀಡುತ್ತಾರೆ. ಅದರ ಆಧಾರದ ಮೇಲೆ ಸಂಗೀತ ನಿರ್ದೇಶಕರು ಹಾರ್ಮೋನಿಯಂ ಮತ್ತಿತರ ಕೆಲವು ವಾದ್ಯಗಳ ಉಪಯೋಗದಿಂದ ರಾಗವನ್ನು ಸಿದ್ಧಪಡಿಸುತ್ತಾರೆ. ಅನಂತರ ಆ ರಾಗಕ್ಕೆ ಹೊಂದುವಂತೆ ಸಂದರ್ಭ ಹಾಗೂ ಪಾತ್ರಗಳನ್ನು ನೆನೆಯುತ್ತಾ ನಾವು ಪದಗಳನ್ನು ಪೋಣಿಸುವ ಕಾರ್ಯ ಮಾಡುತ್ತೇವೆ. (ಇದು ಒಂದು ರೀತಿ ಸರ್ಕಸ್ ಮಾಡಿದ ರೀತಿ ಇರುತ್ತದೆ.) ಹೀಗೆ ಪೋಣಿಸಿದ ಪದಗಳ ಸಾಮೂಹವೇ ನೀವು ಕೇಳುವ ಚಿತ್ರಗೀತೆ.



ಕಳೆದ ವರ್ಷ ಮೈಸೂರಿನ ಕ್ರಾಂತಿಕಳದವರು ಚಿ। ಉದಯಶಂಕರ್ ಅವರನ್ನು ಡಾ। ರಾಜಕುಮಾರ್ ಅಧ್ಯಕ್ಷತೆಯಲ್ಲಿ ಸನ್ಮಾನಿಸಿದಾಗ.

**● ಸಿದ್ಧಪಡಿಸಿದ ರಾಗಕ್ಕೆ ಪದವನ್ನು ಪೋಣಿಸುವುದು ಒಂದು ಕ್ರಮ. ಸಿದ್ಧವಾಗಿರುವ ಪದಕ್ಕೆ ರಾಗ ಸಂಯೋಜಿಸುವುದು ಮತ್ತೊಂದು ಕ್ರಮ. ಇವುಗಳಲ್ಲಿ ನೀವು ಯಾವುದನ್ನು ಇಷ್ಟಪಡುತ್ತೀರಿ?**

ಗೀತ ರಚನಕಾರನಾಗಿ ನಾನು ಹೇಳುವುದೆಂದರೆ – ಮುಂಚೆ ಗೀತೆಯನ್ನು ಪೂರ್ಣವಾಗಿ ಬರೆಸಿ ನಂತರ ರಾಗ ಸಂಯೋಜಿಸಿದರೆ ಚೆನ್ನಾಗಿರುತ್ತೆ. ಆದರೆ ವಾಸ್ತವವಾಗಿ ಈ ತರಹೆಯ ಅವಕಾಶ ದೊರೆಯುವುದು ಅಪರೂಪಕ್ಕೊಮ್ಮೆ ಮಾತ್ರ.

**● ನಿಮ್ಮಿಂದ ರಚಿತವಾಗುವ ಪ್ರತಿಯೊಂದು ಗೀತೆಯೂ ಉತ್ತಮವೆಂದು, ಶ್ರೇಷ್ಠವೆಂದು ಜನಪ್ರಿಯವಾಗಿಬಿಟ್ಟರೆ...**

"ಅದು ಖಂಡಿತ ಸಾಧ್ಯವಿಲ್ಲ. ಹಾಗೊಮ್ಮೆ ಅದು ಸಾಧ್ಯವಾಗುವುದಾದರೆ ತೆರೆ ಕಾಣುವ ಎಲ್ಲ ಕನ್ನಡ ಚಿತ್ರಗಳೂ ಯಶಸ್ವಿನಲ್ಲಿ ಉತ್ತಮ ಮಟ್ಟವನ್ನು ತಲುಪಿ ಕೊನೆಗೆ ನಮ್ಮನ್ನು ಹಿಡಿಯುವವರೇ ಇಲ್ಲವಾಗುತ್ತಾರೆ. ತಯಾರಿಕೆಯಾಗುವ ಚಿತ್ರಗಳು ನೂರಾರು. ಅವುಗಳು ಹೊಂದಿರುವ ಕಥೆ, ಕಥೆಯಲ್ಲಿನ ಪಾತ್ರಗಳು, ಪಾತ್ರಗಳಲ್ಲಿನ ಭಾವನೆಗಳು ಎಲ್ಲ ಬೇರೆ ಬೇರೆಯವು. ಉತ್ತಮವಾದುದನ್ನು ಕೊಡಲು ಎಲ್ಲರಿಗೂ ಇಷ್ಟವೇ. ಅಂತೆಯೇ ನೂರಾರು ಗೀತೆಗಳು. ವರ್ಷದುದ್ದಕ್ಕೂ ನಮ್ಮಿಂದ ರಚಿತವಾಗುತ್ತಲೇ ಇರುತ್ತವೆ. ಆದರೆ ಅವುಗಳಲ್ಲಿ ಯಾವುದು ಎಷ್ಟರ ಮಟ್ಟಿಗೆ ಜನಮನವನ್ನು ತಲುಪಿ ನಿಲ್ಲುತ್ತವೆ ಎಂಬುದು ಮುಖ್ಯ. ಹಾಡು, ಹಾಡು ಬಂದ ಸನ್ನಿವೇಶ, ಅದರ ಚಿತ್ರೀಕರಣ, ಅದನ್ನು ಹಾಡಿದ ಗಾಯಕ ಅಥವಾ ಗಾಯಕಿ, ಸಂಗೀತ ನಿರ್ದೇಶಕ, ಶಬ್ದಗ್ರಾಹಕ, ಸಂಕಲನಕಾರ, ಕೊನೆಗೆ ಅದು ಪ್ರದರ್ಶಿತವಾಗುವ ಚಿತ್ರಮಂದಿರ ಹೀಗೆ ಎಲ್ಲವೂ ಉತ್ತಮವಾಗಿ ಕೂಡಿ ಬರುವ ಭಾಗ್ಯ ಕೆಲವು ಚಿತ್ರಗಳಿಗೆ ಮಾತ್ರ ಇರುತ್ತದೆ. ಹಾಗೆಯೇ ನಮ್ಮ ಗೀತೆಗಳೂ ಕೂಡ ಅದೃಷ್ಟವನ್ನೇ ಅವಲಂಬಿಸಿರುತ್ತವೆನ್ನಬಹುದು.

**● ಚಿತ್ರವೊಂದಕ್ಕೆ ಗೀತೆಯನ್ನು ರಚಿಸುವುದು ಪಾತ್ರ ಮತ್ತು ಸನ್ನಿವೇಶಕ್ಕೆ ಹೊಂದುವಂತೆ ಮಾತ್ರ ಎನ್ನುವುದು ನಿಜವಾದರೂ ಅವುಗಳ ಮೂಲಕ ಮತ್ತೇನನ್ನಾದರೂ ಜನತೆಗೆ ತಿಳಿಸುವ ಉದ್ದಿಶ್ಯ ತಮಗಿದೆಯೇ?**

ಅನೇಕ ಕವಿಪುಂಗವವರು, ದಾಸವರೇಣ್ಯರು, ಶಿವಶರಣರು, ಜನಪದ ವ್ಯಕ್ತಿಗಳು ಸೃಷ್ಟಿಸಿದ ಶ್ರೀಮಂತ ಸಾಹಿತ್ಯ ಉಳಿಯಬೇಕು, ಬೆಳೆಯಬೇಕು ಎಂಬುದು ಪ್ರತಿಯೊಬ್ಬ ಸಾಹಿತ್ಯಕಾರನ, ಸಾಹಿತ್ಯ ಪ್ರೇಮಿಯ ಇಚ್ಛೆಯಾಗಿದೆ. 'ಉಳಿಸುವುದು' ಎಂದರೆ ಆ ಹಿರಿಯರ ಕೃತಿಗಳ ತತ್ತ್ವವನ್ನು ಸಾಮಾನ್ಯ ಜನಕ್ಕೂ ತಿಳಿಯುವಂತೆ ಹೇಳುವುದು ಎಂಬುದೇ ನನ್ನ ಭಾವನೆ. ನಮ್ಮ ಈ ಚಲನಚಿತ್ರ ಮಾಧ್ಯಮದಲ್ಲಿ ಒಂದು ಅನುಕೂಲವಿದೆ. ಅದೆಂದರೆ – ಗ್ರಂಥ ಸಾಹಿತ್ಯ ಓದು ಬಲ್ಲವರಿಗೆ ಮಾತ್ರ ಮೀಸಲಾಗಿದ್ದರೆ, ಚಿತ್ರಸಾಹಿತ್ಯ ಅಕ್ಷರ ಜ್ಞಾನವಿಲ್ಲದವರಿಗೂ ಕೂಡ ಎಷ್ಟೋ ವಿಷಯಗಳನ್ನು ತಿಳಿಸಲು ಸಹಕಾರಿಯಾಗಿದೆ. ಆದ್ದರಿಂದ 'ನಮ್ಮ' ಮಾಧ್ಯಮವಾದ 'ಚಿತ್ರಗೀತೆ'ಗಳ ಮೂಲಕ ಆ ಹಿರಿಯರ ನುಡಿಮುತ್ತುಗಳನ್ನು ಆಯ್ದು ಸುಲಭ ಭಾಷೆಯಲ್ಲಿ ಬರೆದು ಜನಕ್ಕೆ ತಲುಪಿಸಬೇಕೆಂಬ ಉದ್ದಿಶ್ಯ ನನಗೆ ಬಹಳವಿದೆ. ಅದರಂತೆ ಹಲವಾರು ಗೀತೆಗಳೂ ನನ್ನಿಂದ ರಚಿತವಾಗಿವೆ. ಅವಕಾಶವು ದೊರೆತಾಗ ಮುಂದೆಯೂ ಆಗಬಹುದು.

**● ನೀವು ಮೇಲೆ ಹೇಳಿದ ಉದ್ದಿಶ್ಯದ ರೀತ್ಯ ನಿಮ್ಮಿಂದ ರಚಿತವಾದ ಹಲವು ಗೀತೆಗಳನ್ನು ಹೆಸರಿಸುವಿರಾ?**

"(1) ಬಾನಿಗೊಂದು ಎಲ್ಲೆ ಎಲ್ಲಿದೆ ನಿನ್ನಾಸೆಗೆಲ್ಲಿ ಕೊನೆಯಿದೆ, (2) ಮಾಮರವೆಲ್ಲೋ ಕೋಗಿಲೆಯೆಲ್ಲೋ ಏನೀ ಸ್ನೇಹ ಸಂಬಂಧ, (3) ಚೆಲುವೆಯ ಅಂದದ ಮೊಗಕೆ ಕಣ್ಣೇ ಭೂಷಣ, (4) ಬಾಳಿಗೊಂದು ನೀತಿಯುಂಟು ಅರಿತು ಬಾಳಬೇಕು, (5) ಬಾಡಿಹೋದ ಬಳ್ಳಿಯಿಂದ ಹೂವು ಅರಳಬಲ್ಲದೆ, (6) ನಗಿಸಲು ನೀನು ನಗುವೆನು ನಾನು ನಾನೊಂದು ಗೊಂಬೆಯು ನೀ ಸೂತ್ರಧಾರಿ, (7) ಕೇಳಿದ್ದು ಸುಳ್ಳಾಗಬಹುದು ನೋಡಿದ್ದು ಸುಳ್ಳಾಗಬಹುದು ನಿಧಾನಿಸಿ ಯೋಚಿಸಿದಾಗ ನಿಜವು ತಿಳಿವುದು, (8) ಭಾವವೆಂಬ ಹೂವು ಅರಳಿ ಗಾನವೆಂಬ ಗಂಧ ಚೆಲ್ಲಿ, (9) ಬಳ್ಳಿಗೆ ಹೂವು ಚೆಂದ, ಹೂವಿಗೆ ದುಂಬಿ ಚೆಂದ, (10) ಬಾನಲ್ಲು ನೀನೇ ಭುವಿಯಲ್ಲು ನೀನೆ ಇತ್ಯಾದಿ, ಇತ್ಯಾದಿ.

**● ಚಿತ್ರದಲ್ಲಿನ ಗೀತೆಯೊಂದು ಪಾತ್ರದ ಗುಣವನ್ನು, ಸಂದರ್ಭದ ಸೊಗಸನ್ನು ಎಷ್ಟರ ಮಟ್ಟಿಗೆ ಹೆಚ್ಚಿಸಬಲ್ಲುದು ಎಂಬುದಕ್ಕೆ ನೀವು ಉದಾಹರಣೆ ಹೇಳುವಿರಾ?**

ಉದಾಹರಣೆ ಹಲವಾರಿವೆ. ಆದರೆ ಎರಡನ್ನು ಮಾತ್ರ ಈ ಸಂದರ್ಭದಲ್ಲಿ ಹೇಳಬಯಸುತ್ತೇನೆ. ಮೊದಲನೆಯದು: 'ಕಸ್ತೂರಿ ನಿವಾಸ' ಚಿತ್ರದ ನಾಯಕ ರವಿ ಹೇಳುವ "ಆಡಿಸಿ ನೋಡು ಬೀಳಿಸಿ ನೋಡು ಉರುಳಿ ಹೋಗದು."

ಎರಡನೆಯದು: 'ರವಿಚಂದ್ರ' ಚಿತ್ರದಿಂದಾಯ್ದ ಒಂದು ಸನ್ನಿವೇಶ. ಚಂದ್ರ ರವಿಯಾಗಿ ವೇಷ ಧರಿಸಿ ರವಿಯ ಮನೆಗೆ ಬಂದಿರುತ್ತಾನೆ. ರವಿಯ ಪತ್ನಿ ಇವನನ್ನೆ ರವಿಯೆಂದು ತಿಳಿದಿರುತ್ತಾಳೆ, ಆತನೊಂದಿಗಿರಲು ಬಯಸುತ್ತಾಳೆ. ಆದರೆ ಚಂದ್ರನ ಮನಸ್ಸಿನಲ್ಲಿ ಆಕೆಯ ಬಗ್ಗೆ ಎಂತಹ ಭಾವನೆಯಿತ್ತು ಎಂಬುದನ್ನು "ಆದಿಶಕ್ತಿಯೋ, ಮಹಾಲಕ್ಷ್ಮಿಯೋ, ವಾಣಿಯೋ ಕಾಣೆ ನಾ" ಎಂದೂ, ಪುನಃ "ನಿನ್ನನ್ನು ನೋಡುತಿರೆ ಕೈ ಮುಗಿವಾ ಆಸೆಯೇಕೊ ಕಾಣೆ" ಎಂಬ ಸಾಲುಗಳಿರುವ ಹಾಡಿನ ಮೂಲಕ ಹೇಳಿಸಲಾಗಿದೆ. ಅಕಸ್ಮಾತ್ ಯಾರಾದರೂ ಚಿತ್ರ ನೋಡುವಾಗ ಈ ಸಾಲುಗಳನ್ನು ಕೇಳಲು ಮರೆತರೆ ಆ ಪಾತ್ರದ ಸ್ವರೂಪವೇ ತಿಳಿಯದಂತಾಗಿಬಿಡುತ್ತದೆ.

ಹೀಗೆ ಹಾಡು ಸನ್ನಿವೇಶದೊಂದಿಗೇ ಬೆರೆತು ಬರುವಂತಾದಾಗ ನನಗೆ ಉಂಟಾಗುವ ಆನಂದ ಅಷ್ಟಿಷ್ಟಲ್ಲ.

**● ಅನೇಕ ಚಿತ್ರಗಳಿಗೆ ಸಂಭಾಷಣೆಯನ್ನು, ಗೀತೆಗಳನ್ನು ರಚಿಸಿ ಜನಪ್ರಿಯರಾಗಿರುವ ತಮ್ಮ ಕಾರ್ಯದ ಬಗ್ಗೆ ಈಗ ತಮಗೇ ಏನನ್ನಿಸುತ್ತದೆ?**

ನನ್ನ ಕಾರ್ಯದ ಬಗ್ಗೆ ಹೇಳಬೇಕಾಗಿರುವುದು ನಾನಲ್ಲ, ಜನಗಳು. ಜನಗಳು ಮೆಚ್ಚಿದಾಗ ಸಂತೋಷಿಸಿದ್ದೇನೆ. 'ತಿದ್ದಿಕೊಳ್ಳಿ' ಎಂದಾಗ ತಿದ್ದಿಕೊಳ್ಳಲು ಪ್ರಯತ್ನಿಸಿದ್ದೇನೆ. ಈಗ ನನಗನ್ನಿಸುವುದೆಲ್ಲಾ ಇಷ್ಟೆ. ಕನ್ನಡ ಸಾಹಿತ್ಯ ಕ್ಷೀರಸಾಗರದಂತೆ. ಅದರಿಂದ ನಾವು ಎಷ್ಟು ತೆಗೆದರೂ ಇನ್ನೂ ಉಳಿದಿರುತ್ತದೆ. ಇಂತಹ ಅಮೃತಮಯವಾದ ಸಾಹಿತ್ಯವನ್ನು ಇನ್ನೂ ಹೆಚ್ಚು ಹೆಚ್ಚು ಓದಬೇಕು, ಓದಿ ಓದಿ ಅರಿಸಬೇಕು, ಅರಿಸಿದ್ದನ್ನು, ಜ್ಞಾಪಿಸಿಕೊಳ್ಳುತ್ತಿರಬೇಕು, ಜ್ಞಾಪಿಸಿಕೊಂಡಿದ್ದನ್ನು ನನ್ನ ಲೇಖನಿಯ ಮೂಲಕ ಜನಗಳಿಗೆ ತಿಳಿಸುತ್ತಿರಬೇಕು. ಆಗ ಮಾತ್ರ ಜನಗಳು ನಮಗೆ ನೀಡಿರುವ ಅವಕಾಶವನ್ನು ಸಾರ್ಥಕಪಡಿಸಿಕೊಂಡಂತೆ ಆಗುತ್ತದೆ. ●

ಫೋಟೋ : ಕೆ. ಜಿ. ಶಿವಯೋಗಿ

# ವ್ಯಕ್ತಿ ವಿಶೇಷ

## ಎಸ್. ವಿ. ರಾಜೇಂದ್ರಸಿಂಗ್ (ಬಾಬು)

ಕನ್ನಡ ಸಿನಿಮಾದ ನಿರ್ದೇಶಕ ಎಸ್. ವಿ. ರಾಜೇಂದ್ರ ಸಿಂಗ್ ಬಾಬು ಪ್ರಕೃತ ರಾಷ್ಟ್ರೀಯ ಸುದ್ದಿಯಾಗಿದ್ದಾರೆ. ಕನ್ನಡದಲ್ಲಿ ಆತ ನಿರ್ದೇಶಿಸಿದ 'ಅಂತ' ಈ ಮೊದಲೇ ಪ್ರಚಾರದ ಬಿರುಗಾಳಿಗೆ ಸಿಕ್ಕು, ಸದರಿ ಚಿತ್ರ ಬಾಕ್ಸ್ ಆಫೀಸ್‌ನಲ್ಲಿ ಪ್ರಚಂಡ ಯಶಸ್ಸು ಪಡೆದುದರಿಂದ, ಅದರ ಹಕ್ಕನ್ನು ಹಿಂದಿ ನಿರ್ಮಾಪಕರು ಪಡೆದು 'ಮೇರಿ ಆವಾಜ್ ಸುನೋ' ತಯಾರಿಸಿದರು. ಚಿತ್ರ ತೆರೆ ಕಂಡ ದಿನದಿಂದಲೆ ಅದರ ವಸ್ತು ಮತ್ತೆ ವಿವಾದವಾಗಿ ವಿಷಯ ಲೋಕಸಭೆಯನ್ನೂ ಪ್ರವೇಶಿಸಿತು. ಅನಂತರ ಕೇಂದ್ರ ಸರ್ಕಾರ 'ಮೇರಿ ಆವಾಜ್ ಸುನೋ' ಸಂದರ್ಶನಕ್ಕೆ ನಿಷೇಧ ಹೇರಿತು. ಈ ಆಜ್ಞೆಗೆ ಯು.ಪಿ, ದೆಹಲಿ, ಮಹಾರಾಷ್ಟ್ರ ಹೈಕೋರ್ಟು ತಡೆಯಾಜ್ಞೆ ಕೊಟ್ಟಿದ್ದು ಸದ್ಯಕ್ಕೆ ಚಿತ್ರ ಓಡುತ್ತಿದೆ. ಇಷ್ಟೆಲ್ಲ ವಿವಾದ ಆದುದರಿಂದ ರಾಷ್ಟ್ರೀಯ ಮಟ್ಟದ ಪತ್ರಿಕೆಗಳಿಂದ ದೊರಕಿದ ಪ್ರಚಾರ ನಿರ್ಮಾಪಕರ ಮಟ್ಟಿಗೆ 'ಮೇರಿ ಆವಾಜ್



ಸುನೋ' ಬಂಗಾರದ ಗಣಿಯಾಗಿದೆ. ಚಿತ್ರದ ಯಶಸ್ಸು ಬಾಬುಗೆ ಮುಂಬಯಿ ಚಿತ್ರರಂಗದಲ್ಲಿಹೆಸರುವಾಸಿ ಮಾಡುತ್ತಿದೆ. ತಾರೆ ಹೇಮಾಮಾಲಿನಿ ತಾನು ಬಾಣಂತಿಯಾಗಿರುವ ನಡುವೆಯೂ ಸಿಂಗ್‌ರನ್ನು ಆಹ್ವಾನಿಸಿ ತನ್ನ ಮಾಜಲ್ ಕ್ರಿಯೇಷನ್ಸ್ ಮೂಲಕ ಚಿತ್ರ ತಯಾರಿಸುತ್ತಿದ್ದಾಳೆ. ಧರ್ಮೇಂದ್ರ ತನ್ನ ಪುತ್ರ ಅಜಯ್‌ನಿಗೆ ಹಾಗೂ ಜಿತೇಂದ್ರ ಸಿಂಗ್‌ರನ್ನು ಚಿತ್ರ ನಿರ್ದೇಶಿಸಲು ಕೋರಿದ್ದಾರೆ. ಕನ್ನಡದ ತಾಂತ್ರಿಕರೊಬ್ಬರು ಇಷ್ಟೊಂದು ಭಾರೀ ಭಾರೀ ವ್ಯಕ್ತಿಗಳಿಂದ ಆಹ್ವಾನ ಪಡೆಯುತ್ತಿರುವುದು ಒಂದು ರೀತಿಯಲ್ಲಿ ಹೆಮ್ಮೆಯೇ. ಹಿಂದಿಯವರು ತನ್ನಿಂದ ಚಿತ್ರ ಮಾಡಿಸುವುದಿದ್ದರೆ ಅವರು ಬೆಂಗಳೂರಿಗೇ ಬರಬೇಕು. ನನ್ನ ಕೋರಿಕೆಗೆ ಹಿಂದಿ ತಾರೆಯರು ಈಗಾಗಲೇ ಒಪ್ಪಿಕೊಂಡಿದ್ದಾರೆ. ಇಲ್ಲಿ ಸರ್ಕಾರ ಸ್ವಲ್ಪವಾದರೂ ಅನುಕೂಲ ಮಾಡಿಕೊಟ್ಟರೆ ಕರ್ನಾಟಕದಲ್ಲಿ ಸಾಕಷ್ಟು ಮಟ್ಟಿಗೆ ಹಿಂದಿ ಚಿತ್ರರಂಗ ನೆಲೆಗೊಳ್ಳುತ್ತದೆ ಎನ್ನುತ್ತಾರೆ ಸಿಂಗ್. ಆತ ನಿರ್ದೇಶಿಸುವ 'ಗಂಡ ಭೇರುಂಡ' ಮತ್ತು 'ಕಾಳಿಂಗಸರ್ಪ' ಚಿತ್ರಗಳು ಇನ್ನೇನು ತೆರೆಕಾಣುತ್ತವೆ.

* * *

## ಅಂಬಿಕ

ಕನ್ನಡ ಚಿತ್ರರಂಗಕ್ಕೆ ಹೊರಗಿಂದ ಈಗಾಗಲೇ ಬೇಕಾದಷ್ಟು ಮಂದಿ ತಾರೆಯರು ಬಂದಿದ್ದಾರೆ – ಹೋಗಿದ್ದಾರೆ. ಆ ಪೈಕಿ ಅಂಬಿಕಾ ಭಾರೀ ಕುತೂಹಲದ ಸುದ್ದಿಯನ್ನೆ ಮಾಡಿದ್ದಾಳೆ. ಪ್ರಕೃತ ಈಕೆ ಜನಪ್ರಿಯ ನಾಯಕ ನಟ ಶ್ರೀನಾಥ್ ಎದುರಿಗೆ 'ಗರುಡರೇಖೆ' ಯಲ್ಲಿ ನಾಯಕಿಯಾಗಿ ಅಭಿನಯಿಸುತ್ತಿದ್ದು ಈ ಸಮಯದಲ್ಲಿ ಶ್ರೀನಾಥ್ ಅಂಬಿಕಾಗೆ ಬೆಂಬಲ ನೀಡುತ್ತಿದ್ದಾರೆ ಎನ್ನುವ ವದಂತಿಗಳು ಹುಟ್ಟಿದಾಗ ಬಹಳ ದಿನಗಳಿಂದ ಉತ್ತಮ ಸ್ನೇಹ ಇಟ್ಟುಕೊಂಡಿದ್ದ ಶ್ರೀನಾಥ್-ಮಂಜುಳಾ ನಡುವೆ ಬಿರುಕುಬಿಟ್ಟಿದೆ ಎಂದು ಪತ್ರಿಕೆಗಳಲ್ಲಿ ದೊಡ್ಡ ತಲೆಬರಹದಲ್ಲಿ ಸುದ್ದಿಗಳಾದವು. ಆದರೆ ಶ್ರೀನಾಥ್ ಉಡುಪಿಯಲ್ಲೆ ಸ್ಪಷ್ಟನೆ ನೀಡಿ ತನ್ನ ಮತ್ತು ಮಂಜುಳಾ ನಡುವೆ ಯಾವುದೇ ವಿರಸವಿಲ್ಲವೆಂದರು. ಅದೇನೇ ಇರಲಿ ಅಂಬಿಕಾ ತನಗೆ ಶ್ರೀನಾಥ್ ದಂಪತಿಗಳು ಹಿಂದಿಯ ಅಮೋಲ್ ಪಾಲೇಕರ್ ದಂಪತಿಗಳಂತೆ ಸರ್ವ ವಿಧದಲ್ಲೂ ನೆರವಾಗುತ್ತಿದ್ದಾರೆ ಎಂದು ಹೇಳಿದ್ದಾಳೆ. ಅಷ್ಟೇ ಅಲ್ಲದೆ ತಾನು ಕನ್ನಡದಲ್ಲಿ 'ಆರತಿ, ಮಂಜುಳಾ ಪೈಪೋಟಿಗೆ ಹೆದರುವವಳಲ್ಲ. ತನಗೆ ಸ್ವಂತಿಕೆ ಇದೆ' ಎಂದೂ ಸಂದರ್ಶನದಲ್ಲಿ ನುಡಿದಿದ್ದಾಳೆ. ಕನ್ನಡ ಚಿತ್ರರಂಗದಲ್ಲಿ ಪರಿಚಯವೇ ಇರದ ಅಂಬಿಕಾ ಇಷ್ಟೊಂದು ಧೈರ್ಯದ ಮಾತುಗಳನ್ನು ಹೇಳಲು ಆಕೆಯ ಬೆನ್ನಹಿಂದೆ ಯಾರೋ ಪ್ರಭಾವಿಗಳು ಇರಲೇಬೇಕು ಎನ್ನುವ ಮಾತೇನೋ ಚಿತ್ರವಲಯದಲ್ಲಿ ಕೇಳಿಬಂದಿದೆ. ಮತ್ತೊಂದೆಡೆ ಅಂಬಿಕಾಳನ್ನು ಕನ್ನಡದಲ್ಲಿ ಮಂಜುಳ ಉತ್ತರಾಧಿಕಾರಿಯನ್ನಾಗಿ ಮಾಡುವ ಯೋಜನೆಯನ್ನೂ ರೂಪಿಸಲಾಗಿದೆಯಂತೆ. ಅಂಬಿಕಾ ಈಗಾಗಲೇಮಲಯಾಳಂ ಚಿತ್ರರಂಗದಲ್ಲಿ 'ಸೆಕ್ಸೀ' ತಾರೆ ಎಂದು ಪ್ರಖ್ಯಾತಿಯಾಗಿದ್ದು ತೆಲುಗಿನಲ್ಲೂ ಅಭಿನಯಿಸುತ್ತಿದ್ದಾಳೆ. ಕನ್ನಡದಲ್ಲಿ ಒಳ್ಳೊಳ್ಳೆ ಅವಕಾಶಗಳು ಅಂಬಿಕಾ ಪಾಲಿಗೆ ಈಗ ಬರುತ್ತಿರುವುದನ್ನು ಗಮನಿಸಿದರೆ ಆಕೆ ತನ್ನ ತಾರಾತನವನ್ನು ದಕ್ಷಿಣ ಚಿತ್ರರಂಗದಲ್ಲಿ ವಿಸ್ತರಿಸಿಕೊಳ್ಳುವ ಸಾಧ್ಯತೆಯೂ ಇದೆ.



* * *

## ಪ್ರಭಾಕರ್

ಕನ್ನಡ ಚಿತ್ರರಂಗದಲ್ಲಿ ಕೆಲವು ನಟರು ನಾಯಕ ನಟರಿಗಿಂತ ಜನಪ್ರಿಯತೆ ಪಡೆದಿದ್ದಾರೆ. ಆ ಪೈಕಿ ಪ್ರಧಾನವಾಗಿ ಕೇಳಿ ಬರುವ ಹೆಸರು ಪ್ರಭಾಕರ್ ರದ್ದು. ಇಂದು ಪ್ರಭಾಕರ್ ಎಷ್ಟು ಅನಿವಾರ್ಯವಾಗಿದ್ದಾರೆ ಎಂದರೆ – ಕನ್ನಡದ ಕೆಲವು ನಿರ್ಮಾಪಕರು ತಮ್ಮ ಚಿತ್ರಗಳಿಗೆ ನಾಯಕ ನಟರಿಗಿಂತ ಹೆಚ್ಚಾಗಿ ಪ್ರಭಾಕರರನ್ನು ಅವಲಂಬಿಸಿದ್ದಾರೆ.

ಆಜಾನುಬಾಹು ವ್ಯಕ್ತಿ ಪ್ರಭಾಕರ್ ಖಳನಾಯಕನಾಗಿ ಚಿತ್ರರಂಗ ಪ್ರವೇಶಿಸಿದವರು. ತನ್ನದೇ ಆದ ಮ್ಯಾನರಿಸಂ



ಹಾಗೂ ಚುರುಕಿನ ನಟನೆ ಮೂಲಕ ಬಹುಬೇಗ ಮಿಂಚಿದ ಪ್ರಭಾಕರ್ 'ಆದಿ ಮಾನವ' ಚಿತ್ರದಲ್ಲಿ ಕೇವಲ ಮೂಕ ಅಭಿನಯದಿಂದ ರಾಷ್ಟ್ರೀಯ ಮಟ್ಟದಲ್ಲೂ ಗಮನ ಸೆಳೆದಿದ್ದರು. ಪ್ರತಿಭೆಯನ್ನು ಬಹುಬೇಗ ಕಂಡುಕೊಂಡ ಚಿತ್ರರಂಗ ಆ ನಂತರ ಹೆಚ್ಚೆಚ್ಚು ವೈವಿಧ್ಯಮಯ ಪಾತ್ರಗಳನ್ನು ನೀಡುತ್ತಿದೆ. ಹೀಗೆ ದೊರಕಿದ ಅವಕಾಶ ಪ್ರಭಾಕರ್ ಸಮರ್ಥವಾಗಿ ಉಪಯೋಗಿಸಿಕೊಳ್ಳುತ್ತಲೂ ಇದ್ದಾರೆ. ಉದಾಹರಣೆಗೆ 'ಪ್ರಚಂಡ ಪುಟಾಣಿಗಳು' ಚಿತ್ರದಲ್ಲಿ ಕ್ಯಾರೆಕ್ಟರ್ ನಟನಾಗಿ ಹೋರಾಡುವಾಗ ಚಿತ್ರರಸಿಕರಿಂದ ಭಾರೀ ಮೆಚ್ಚುಗೆ ಪಡೆದಿದ್ದರು. ಈಚೆಗೆ 'ದೇವರ ಆಟ'ದಲ್ಲಿ ಮಧುಮಾಲಿನಿಯೊಂದಿಗೆ ಡ್ಯಾನ್ಸ್ ಮಾಡುವಾಗ ಪ್ರಭಾಕರ್ ಹೀರೋಗಿಂತಲೂ ಹೆಚ್ಚಿಗೆ ಚಪ್ಪಾಳೆ ಗಿಟ್ಟಿಸಿಕೊಂಡಿದ್ದರು. ಇದೀಗ 'ಚೆಲ್ಲಿದ ರಕ್ತ' ದಲ್ಲಿ ಪ್ರಭಾಕರ್ ಅಭಿನಯ ಚಿತ್ರದ ಹೈಲೈಟ್ ಎನ್ನಲಾಗಿದೆ. ಒಟ್ಟಿನಲ್ಲಿ ಈ ನಟ ನಾಯಕರಿಗೆ ಜನಪ್ರಿಯತೆಯಲ್ಲಿ ಸವಾಲಾಗಿದ್ದಾರೆ.

ಲೇಖನ: ಕೆ. ಜಿ. ಕುಮಾರ್

ಫೋಟೋ: ಶ್ರೀನಿವಾಸಮೂರ್ತಿ, ಶಿವೇಸ್ವಾಮಿ

# ಕಿರು ಚಿತ್ರಗಳಿಗೆ ಚಿತ್ರಕತೆ -3

ಅನುವಾದ: ಬಿ. ಸುರೇಶ್

### ನಿರ್ದೇಶನ ಚಿತ್ರಕಥೆಯದೋ? ನಿರ್ದೇಶಕನದೋ?

ಚಿತ್ರ ತಯಾರಿಕೆ ಸಂಯೋಜಿತ ಸಹಕಾರದಿಂದ ನಡೆಯುವ ಕೆಲಸ. ಸಂಪೂರ್ಣ ತಯಾರಾದ ಒಂದು ಚಿತ್ರ ಎಷ್ಟೋ ಜನರ ಉತ್ಸಾಹ-ಆಲೋಚನೆ-ಅಭಿಪ್ರಾಯಗಳ ಪ್ರತಿಫಲ. ಇವೆಲ್ಲಕ್ಕೆ ಬುನಾದಿ ಚಿತ್ರಕಥೆ. ಯಾರನ್ನೋ ಒಪ್ಪಿಸುವ ಸಲುವಾಗಿ ಬರೆದಂಥ ಚಿತ್ರಕಥೆಗಳು ಅನೇಕ ಬಾರಿ ನಿರ್ಜೀವವಾಗಿ, ಕುಣಿಸಿದ ಬೊಂಬೆಯಂತಾಗಿಬಿಡುವ ಸಾಧ್ಯತೆಯಿದೆ. ಇಂಥವು ಆಗದಂತೆ ನೋಡಿಕೊಳ್ಳುವುದು ಎಲ್ಲರ ಜವಾಬ್ದಾರಿ. ಪ್ರತಿಫಲಾಪೇಕ್ಷಿಗಳು ಅರಿತು ನಡೆಯುವುದು ಸೂಕ್ತ.

ಚಿತ್ರಕಥೆ ಚಿತ್ರದ ಒಂದು ಸ್ಥೂಲ ರೂಪುರೇಖೆ ಅಥವಾ ಬ್ಲೂ ಪ್ರಿಂಟ್. ಚಿತ್ರ ಕೊನೆಯ ಹಂತ ಮುಟ್ಟಲು ಬೇರೆ ಬೇರೆಯವರು ಬೇರೆ ಬೇರೆ ಹಂತಗಳಲ್ಲಿ ದುಡಿಯುತ್ತಾರೆ. ಈ ಎಲ್ಲ ಕೆಲಸಕ್ಕೆ ಚಿತ್ರಕಥೆ ಅತ್ಯಗತ್ಯ. ಅವರನಿಷ್ಠಾವಂತ ದುಡಿಮೆಯೂ ಅಷ್ಟೇ ಮುಖ್ಯ.

ಚಿತ್ರದ ಮುಖ್ಯ ಜವಾಬ್ದಾರಿ ಯಾರ ಮೇಲೆ ಎಂಬುದನ್ನು ಕುರಿತಂತೆ ಅನೇಕ ವಿವಾದಗಳಿವೆ. ಈ ಎಲ್ಲ ವಾದಗಳು ಚಿತ್ರಕಥೆಯ ಪಾತ್ರವನ್ನು ಒಪ್ಪುತ್ತವೆ. ಏಕೆಂದರೆ ಚಿತ್ರ-ಚಿತ್ರಕಥೆಯನ್ನು ಆಧರಿಸಿದೆ. ಆದರಿಂದಾಗಿ ಚಿತ್ರಕಥೆ ಒಂದು ಸಾಮಾನ್ಯ ಬರಹವಾಗುವುದು ಸಲ್ಲ. ಅದು ತನ್ನ ಮೇಲೆ ಕಟ್ಟಲಾಗದ ಭವ್ಯ ಸೌಧಕ್ಕೆ ಭದ್ರ ಬುನಾದಿಯಾಗಬೇಕು.

### ಕಥಾಚಿತ್ರದ ಒಳಿತು–ತೊಂದರೆ

ಕಥಾ ಚಿತ್ರಕ್ಕೆ ಅನುಕೂಲ-ಅನಾನುಕೂಲ ಎರಡೂ ಉಂಟು. ಕಥಾ ಚಿತ್ರದ ಉಪಯೋಗ ಕೆಲವು ಸಾಕ್ಷ್ಯ ಚಿತ್ರ ಅಥವಾ ಪ್ರಚೋದಕ ಚಿತ್ರಗಳ ತಯಾರಿಕೆಯಲ್ಲಿ ಮಾತ್ರ. ಕಥಾಚಿತ್ರ ತಯಾರಿಕೆಗೆ ಒಳ್ಳೆಯ ಚಿತ್ರ ಮಾಡಬೇಕೆಂಬ ಆಸೆ – ಒಳ್ಳೆಯ ವಸ್ತು – ಆರ್ಥಿಕ ಸ್ಥಿತಿಗತಿ – ಚಿತ್ರಕಥಾ ಲೇಖನ ಉತ್ಸಾಹ – ಸಾಮರ್ಥ್ಯ ಅತೀ ಮುಖ್ಯ ಅಂಶಗಳಾಗುತ್ತವೆ.

ಪ್ರೇಕ್ಷಕರಿಗೆ ಒಂದು ಕಥೆಯನ್ನು ಕೇಳುವ – ಆ ಕಥೆಯ ಪಾತ್ರಗಳಲ್ಲಿ ತಮ್ಮನ್ನು ತಾವು ಗುರುತಿಸಿಕೊಂಡು – ತಮ್ಮದೇ ಕಥೆ ಎಂಬ ಭ್ರಾಮಕ ಕಲ್ಪನೆಯಲ್ಲಿ ತೇಲುವ ಪ್ರವೃತ್ತಿ ಇದೆ. ಇಲ್ಲಿ ಅವನ ಭಾವನೆಗಳನ್ನು ತಲುಪುವುದು ಸುಲಭ. ಅನೇಕ ಚಿತ್ರಗಳು ಆತನನ್ನು ಅಂಥ ಕಲ್ಪನೆಗೆ ಎಡೆ ಕೊಡದಂತೆ – ಒಂದು ರೀತಿಯ ಪ್ರಬಂಧದಂತಿದ್ದು – ಅವನನ್ನು ತೊಡಗಿಸಿಕೊಳ್ಳದೆ ಸೋಲುವ ಸಂಭವ ಹೆಚ್ಚು. ಕಥಾ ಚಿತ್ರ ಪಾತ್ರಗಳ ಅನುಭವವನ್ನ ಪ್ರೇಕ್ಷಕನೊಂದಿಗೆ ಹಂಚಿಕೊಂಡು – ಬದುಕಿಗೊಂದು ಮಾದರಿಯನ್ನು ನೀಡುವ ಪ್ರಯತ್ನ ಮಾಡುತ್ತವೆಯಾದ್ದರಿಂದ ಹೆಚ್ಚು ಅನುಕೂಲವಿದೆ.

ಎಲ್ಲ ವಸ್ತುಗಳನ್ನೂ ಕಥಾಚಿತ್ರ ಮಾಡುವುದು ಸಾಧ್ಯವಾಗುವುದಿಲ್ಲ. ಯಾವುದೋ ಮಂತ್ರಿಗಳ ಇಲ್ಲ ಪ್ರಧಾನಿಗಳ ವಿದೇಶ ಪ್ರವಾಸವನ್ನು ತೋರುವ ಚಿತ್ರ ಅಥವಾ ವೈಜ್ಞಾನಿಕ ಬೆಳವಣಿಗೆ, ಮುಂತಾದವುಗಳು ಕಥಾಚಿತ್ರವಾಗುವ ಸಾಧ್ಯತೆಯಿಲ್ಲ. ಆದರೆ ಜನರ ಧೋರಣೆಗಳನ್ನು ಬದಲಿಸಿ, ಬೇರೊಂದು ದಿಕ್ಕಿಗೆ ಪ್ರಚೋದಿಸುವ ಪ್ರಯತ್ನವುಳ್ಳ ಚಿತ್ರಗಳಿಗೆ (ಕುಟುಂಬ ಕಲ್ಯಾಣ ಇತ್ಯಾದಿ) ಕಥೆ ಅವಶ್ಯಕವಾಗುತ್ತವೆ. ಇಂಥಲ್ಲಿ ಲೇಖಕ - ನಿರ್ದೇಶಕರ ಜವಾಬ್ದಾರಿ ಹೆಚ್ಚಾಗುತ್ತದೆ. ಕಥೆ ಎಲ್ಲರಿಗೂ ಒಪ್ಪಿತವಾಗುವಂತಿರಬೇಕು. ಪ್ರೇಕ್ಷಕ ಗುರುತಿಸಲು ಸಾಧ್ಯವಾಗುವಂಥ ಪಾತ್ರಗಳಿರಬೇಕು – ನಿಜಜೀವನದ ಸಹಜತೆಯನ್ನು ತರುವ ಪ್ರಯತ್ನ ಮಾಡಬೇಕು. ಪಾತ್ರಗಳನ್ನು ಸರಿಯಾಗಿ ದುಡಿಸಿಕೊಳ್ಳಬೇಕು. ಅವರು ಅನುಭವೀ ನಟರೋ – ಅನನುಭವಿಗಳೋ ಒಟ್ಟಾರೆ ಅವರಿಗೆ ಆ ಪಾತ್ರ ಉಪಯೋಗಿಸುವ ಯಂತ್ರ ಅಥವಾ ನೇಗಿಲು, ಮುಂತಾದವನ್ನು ಸರಿಯಾಗಿ ಉಪಯೋಗಿಸುವ ಛಾತಿ ಇರಬೇಕು. ಪ್ರೇಕ್ಷಕನಲ್ಲಿ ಒಂದು ವಿಚಿತ್ರ ನಿಯಮವಿದೆ. ಅವನು ಒಂದು ದೀರ್ಘಾವಧಿ ಚಿತ್ರದ ತನ್ನ ನೆಚ್ಚಿನ ನಟ – ತಪ್ಪಾಗಿ ನಟಿಸಿದರೆ ಕ್ಷಮಿಸುತ್ತಾನೆ. ಆದರೆ ಕಿರು ಚಿತ್ರದ ಅಪರಿಚಿತ ಮುಖದ ನಟ ತಪ್ಪು ಮಾಡಿದರೆ ಇಡೀ ಚಿತ್ರಮಂದಿರದ ಚಾವಣಿಯೇ ಹಾರುವಂತೆ ಕೂಗುತ್ತಾನೆ. ಇದು ಕಿರುಚಿತ್ರ ನಟನಿಗೆ ಸವಾಲಾಗಿದೆ.

ಒಂದು ಸಹಜವೂ, ಸತ್ಯವೂ ,ಸತ್ವಯುತವೂ ಆದ ಕಥೆ ಇರಬೇಕು – ಅದು ಆಯಾ ಪ್ರಾಂತ್ಯದ ಭಾಷೆ ಗುಣಗಳನ್ನು ಹೊಂದಿರಬೇಕು. ಆಗ ಗೆಲ್ಲುವ ಸಾಧ್ಯತೆಗಳುಂಟು. ಇತ್ತೀಚಿನ ದಿನಗಳಲ್ಲಿ ಪ್ರೇಕ್ಷಕ ಬೆಳೆದುಬಿಟ್ಟಿದ್ದಾನೆ. ಸಿನಿಮಾ ಭಾಷೆಯನ್ನು ಅರ್ಥಮಾಡಿಕೊಂಡಿದ್ದಾನೆ – ನೀತಿ ಬೋಧಕಗಳನ್ನು ಪುರಾಣದ ಪೊಳ್ಳು ಕಥೆಗಳನ್ನು ಅವನು ಒಪ್ಪುತ್ತಿಲ್ಲ. ಅವನು ಸಹಜತೆಯನ್ನು ಹುಡುಕುತ್ತಿದ್ದಾನೆ. ಇದು ಹೊಸ ರೀತಿಯ ಚಿತ್ರಗಳ ಉಗಮಕ್ಕೆ ಕಾರಣವಾಗಿದ್ದಿರಬಹುದು. ಜನ ತಮ್ಮ ಹಳೆಯ ಸಂಪ್ರದಾಯ – ಕಟ್ಟುಪಾಡುಗಳನ್ನು ಮರೆಯುತ್ತಿದ್ದಾರೆ. ಅವರಿಗೆ ಹೊಸತನ ಬೇಕಾಗಿದೆ. ಇದು ಚಿತ್ರಕಥಾ ಲೇಖಕನಿಗೆ ಸದಾ ಕಾಲವೂ ಸವಾಲಾಗಿಯೇ ನಿಲ್ಲುತ್ತದೆ. ಹೊಸತನ್ನ ಕೊಡುವುದಕ್ಕೆ ಹೊಸದರ ಕಲ್ಪನೆ ಮಾಡುವ ಛಾತಿ ಬೇಡವೆ?

ಇದರೊಂದಿಗೆ ಆರ್ಥಿಕವಾಗಿ – ತಯಾರಿಕೆಯ ದೃಷ್ಟಿಯಿಂದ ಸಹಾಯವಾಗುವ ಕಥೆಯಾಗಬೇಕು. ಇಲ್ಲಿ ಲೇಖಕನ ಆಲೋಚನಾ ದೃಷ್ಟಿಗೆ ಹೆಚ್ಚಿನ ಸ್ವಾತಂತ್ರ್ಯ.

### ಸಂಭಾಷಣೆ

ಚಿತ್ರದ ಸಂಭಾಷಣೆ ನಾಟಕದಿಂದ ಪ್ರಭಾವಿತವಾದದ್ದು ಆದರೂ ನಾಟಕಕ್ಕೂ ಸಿನಿಮಾಕ್ಕೂ ಇರುವ ವ್ಯತ್ಯಾಸ ಅಗಾಧ. ಚಿತ್ರದಲ್ಲಿನ ಮಾತುಗಳು ಪಾತ್ರಗಳಿಗೆ ಹತ್ತಿರವಾಗಿದ್ದು ಸಹಜವಾಗಿರುತ್ತಧೆ. ಆದರೆ ನಾಟಕ ನಾಟಕೀಯ ಎನಿಸುವ ಅಸಹಜತೆಯ ಸಂಭಾಷಣೆ ಹೊಂದಿರುತ್ತದೆ. ಇಂಥ ನಾಟಕೀಯ ಮಾತುಗಳು ಚಿತ್ರಗಳಿಗೆ ಹೊಂದುವುದಿಲ್ಲ. ಇದರಿಂದಾಗಿ ಸಂಭಾಷಣೆ ಬರೆಯುವವರಿಗೆ ಕೆಲಸ ಹೆಚ್ಚು. ಅವನು ಚಿತ್ರದಲ್ಲಿ ಎಲ್ಲ ಪಾತ್ರಗಳ ವೈವಿಧ್ಯಮಯ ಭಾಷಾಶೈಲಿಯನ್ನು ಸಹಜವಾಗಿ ಬಳಸುವಲ್ಲಿ ಪಳಗಿರಬೇಕು. ಇಲ್ಲವಾದಲ್ಲಿ ಪಾತ್ರಗಳಾಡುವ ಮಾತುಗಳು ಅಸಹಜವಾಗಿ ಏನನ್ನೊ ಹೇಳಲಿಕ್ಕೆಂದೇ ಬಳಸಿದಂತೆನಿಸಿಬಿಡುತ್ತವೆ. ಪ್ರೇಕ್ಷಕ ಇಂಥ ತಪ್ಪುಗಳನ್ನು ಮನ್ನಿಸಲಾರ.

ಇತ್ತೀಚೆಗೆ ಸಂಭಾಷಣೆಯನ್ನು ಆಯಾ ಪಾತ್ರಗಳನ್ನು ಮಾಡುವ ನಟರೆ ಬೆಳೆಸಿಕೊಳ್ಳುತ್ತಾರೆ (Improvisation). ಇಂಥಲ್ಲಿ ಲೇಖಕ ದೃಶ್ಯದ ಒಟ್ಟು ಅರ್ಥವನ್ನು– ಅವನಿಗೆಬೇಕಾದ ತಿರುವುಗಳ ಸಹಿತವಾಗಿ –ವಿಷದೀಕರಿಸುತ್ತಾನೆ. ಅದಕ್ಕೆ ತಕ್ಕಂತೆ ಆಯಾ ಪಾತ್ರಗಳ ನಟ ನಟಿಯರು ಸಂಭಾಷಿಸುತ್ತಾರೆ. ಇದು ಇಡೀ ಚಿತ್ರದಲ್ಲಿ ಒಂದು ರೀತಿಯ ಚೇತನ ಉಳಿಯುವಂತೆ ಮಾಡುತ್ತದೆ. ಆದರೆ ಇಂಥ ಪ್ರಯೋಗಗಳು ಅನೇಕ ಬಾರಿ ಹಾದಿ ತಪ್ಪುವ ಸಂಭವವೂ ಉಂಟು. ಇಂಥಲ್ಲಿ ಚಿತ್ರಕಥಾ ಲೇಖಕನ ಪಾತ್ರ ಅದನ್ನು ಬಳಸಿಕೊಳ್ಳುವಲ್ಲಿ ನಿರ್ದೇಶಕನ ಬುದ್ಧಿವಂತಿಕೆ ಇಂಥ ಪ್ರಯೋಗಗಳಿಗೆ ತಕ್ಕ ಆರ್ಥಿಕ ಸ್ವಾತಂತ್ರ್ಯ – ಇವು ಮುಖ್ಯವಾಗುತ್ತದೆ.

ಸಾಕ್ಷ್ಯ ಚಿತ್ರಗಳಲ್ಲಿ ಇಂಥ ಪ್ರಯೋಗಗಳಿಗೆ ಹೆಚ್ಚಿನ ಅವಕಾಶವಿರುವುದಿಲ್ಲ. ಆದರೆ ಕಥಾ ಚಿತ್ರದಲ್ಲಿ ಇಂಥ ಪ್ರಯೋಗಗಳಿಗೆ ಅವಕಾಶ ಉಂಟು. ಇದು ಚಿತ್ರವನ್ನು ಸಹಜೀಕರಿಸುವ ಪ್ರಯತ್ನ. ಇಂಥದೇ ಪ್ರಯತ್ನಗಳಾದ (Candid Cinema. Verite Cinema, Free Cinemaದಂಥ) ಹೊಸ ಪ್ರಯೋಗ ತಂತ್ರಗಳನ್ನು ಅಳ



ಪೂರಾ ಎಂಟರ್‌ಪ್ರೈಸಸ್ ಅವರ ಹೊಸ ವರ್ಣ ಚಿತ್ರದಲ್ಲಿ ಶಕ್ತಿಪ್ರಸಾದ್, ಅಶೋಕ್, ವಿನೀತ್, ಬಾಲಕೃಷ್ಣ.

ವಡಿಸಬಹುದು. ಇವು ನೈಜತೆಯನ್ನು, ಅಸ್ತಿತ್ವವನ್ನು ತೋರುವ – ಮುಂಚೆಯೆ ಕರಡು ಪ್ರತಿಯನ್ನು ತಯಾರಿಸದೆ – ಕ್ಯಾಮರ ಕಣ್ಣನ್ನ ನಡೆದ ಘಟನೆಯತ್ತ ತಿರುಗಿದಂತೆ ತೋರುವ ಪ್ರಯೋಗಗಳು. ಇನ್ನೊಂದು ಹೊಸ ಪ್ರಯೋಗ ಪ್ರೇಕ್ಷಕನನ್ನು ಕುರಿತ ನೇರ ಮಾತುಕಥೆ. ಚಿತ್ರದಲ್ಲಿ ಪ್ರೇಕ್ಷಕನನ್ನು ತೊಡಗಿಸಿಕೊಳ್ಳುವಲ್ಲಿ ಸಹಕಾರಿ ಎನ್ನುತ್ತದೆ. ಇಂಥವು ಎಲ್ಲ ರೀತಿಯ ಚಿತ್ರಗಳಿಗೂ ಹೊಂದುವುದಿಲ್ಲ. ಕೆಲ ಸಾಕ್ಷ್ಯಚಿತ್ರ – ಪ್ರಚೋದಕ ಚಿತ್ರ. ಪ್ರಚಾರ ಚಿತ್ರಗಳಲ್ಲಿ ಪಾತ್ರಗಳಾಡುವ ಮಾತುಗಳು 1) ಅನೇಕವಾಗಿ ಪಾತ್ರಗಳಿಗೆ ಸಂಬಂಧಿಸಿರಬೇಕು,2) ಪ್ರತಿ ಮಾತು ಒಂದು ಸಂದೇಶವನ್ನು, ಸುದ್ದಿಯನ್ನು, ಹೊಸ ವಿಷಯವನ್ನು ಹೇಳಬೇಕು. ಇಂಥಲ್ಲಿ ಪ್ರೇಕ್ಷಕರೊಡನೆ ನೇರ ಮಾತು ಅನೇಕ ಸಂದರ್ಭಗಳಲ್ಲಿ ಹೊಂದುವುದಿಲ್ಲ.

ಇಂಥ ಅನೇಕ ಎಡರುತೊಡರುಗಳೊಂದಿಗೆ ರಾಜಿಯಾಗದೆ ಚಿತ್ರಕಥೆ ಬರೆಯುವುದು ಕಷ್ಟವೆ. ಚಿತ್ರಕಥೆಯ ಕಾಲಾವಧಿ – ಆ ಅವಧಿಯಲ್ಲಿ ಅದು ತಿಳಿಸಬೇಕಿರುವ ವಿಷಯಗಳು, ಇವು ಸಂಭಾಷಣೆ ಗಡಿ ಮೀರದಂತೆ ಮಾಡಿದ ಕಾರಣಗಳು, ಇದರಿಂದಾಗಿ ಇಂಥ ಚಿತ್ರಗಳು 'ನೀತಿಬೋಧಕ'ವಾಗಿ ಬಿಡುವ ಸಾಧ್ಯತೆ ಹೆಚ್ಚು.

ಕಿರುಚಿತ್ರಗಳ ಚೈತನ್ಯ ಉಳಿಸಲು ಇನ್ನೂ ಅನೇಕ ಮಾರ್ಗಗಳನ್ನು ಉಪಯೋಗಿಸಬಹುದು. 'ಹೊಂದಿಸುವಿಕೆ' (Binding) ತಂತ್ರ ಉಪಯುಕ್ತ. ಸಂಭಾಷಣೆಯನ್ನು ಮುಖ್ಯವಾದಲ್ಲಿ ಮಾತ್ರ ಬಳಸಬಹುದು. ಇನ್ನುಳಿದಲ್ಲಿ ನಟನೆಗೆ, ನಿಶ್ಶಬ್ದಕ್ಕೆ ಸ್ಥಳ ಕೊಡಬಹುದು. ಸಂಗೀತವನ್ನು ಸಂಭಾಷಣೆಯಷ್ಟೇ ಪರಿಣಾಮಕಾರಿಯಾಗಿ ಬಳಸಬಹುದು. ಕಥನ (Narration) ತಂತ್ರ ಬಳಸಬಹುದು. ಇಂಥ ಕಥನವನ್ನು ನಟನ ಧ್ವನಿಯಲ್ಲಿಯೋ ನೇಪಥ್ಯದಲ್ಲಿ ಬಳಸಬಹುದು. ಇಂಥ ಅನೇಕ ಪ್ರಯತ್ನಗಳು ಈಗಾಗಲೇ ಆಗಿವೆ. ಆದರೆ ಗಟ್ಟಿಯೆನಿಸುವ ಉದಾಹರಣೆಗಳಿಲ್ಲ. ಅನೇಕ ಕಿರುಚಿತ್ರಗಳ ಉಪಯುಕ್ತ ಭಾಗಗಳ ತುಣುಕುಗಳನ್ನು ನೋಡಿ ಇಂಥ ಉಪಯುಕ್ತ ಭಾಗಗಳ ಉಪಯುಕ್ತತೆಯನ್ನು ವಿಶ್ಲೇಷಿಸಿ ಉಪಯೋಗಿಸಿಕೊಳ್ಳಬೇಕು.

ವಿವರಣೆ (Commentary) ನೀಡುವುದು ದೊಡ್ಡ ಜವಾಬ್ದಾರಿಯ, ಸಣ್ಣ ಕೆಲಸ. ವಿವರಣೆ ಚಿತ್ರದ ವಸ್ತುವನ್ನು – ಇನ್ನಷ್ಟು ಒತ್ತು ಕೊಟ್ಟು ತಿಳಿಸಲು ಸಹಕರಿಸುವ ಸಾಧನ. ಇದನ್ನು ಪರಿಣಾಮಕಾರಿಯಾಗಿಸುವುದು (1) ಬರವಣಿಗೆ, (2) ಧ್ವನಿ. ಇವುಗಳ ಉಪಯೋಗ ಸರಿಯಾಗದಿದ್ದಲ್ಲಿ ಬರವಣಿಗೆ ಹಾದಿ ತಪ್ಪುತ್ತಧೆ. ಸರಳವಾಗಿ, ಮಿತವಾಗಿ, ಉಪಯೋಗಿಸಿದ ಸಂಭಾಷಣೆ ಪರಿಣಾಮಕಾರಿ. ಚಿತ್ರಗಳಲ್ಲಿ ನೋಡುವುದು ಪ್ರಧಾನ ಕೆಲಸ. ಕೇಳುವುದು ಒಂದು ಸಹಕಾರಿ ಕೆಲಸ. ಆದರಿಂದಾಗಿ ವಿವರಣೆಯುಂಥವುಗಳು ಸಾಹಿತ್ಯವಲ್ಲ. ದೃಶ್ಯ ಕಾವ್ಯಕ್ಕೆ ಸಹಾಯಕವಾಗುವ ಸರಳ ಭಾಷೆ ಎಂಬುದನ್ನು ಸಾಹಿತಿ ನೆನಪಲ್ಲಿಡಬೇಕು; ಕ್ರಿಯಾಪದಗಳಿಲ್ಲದ ವಾಕ್ಯಗಳಗಳನ್ನು – ಅರ್ಥಯುತ ಪದಗಳನ್ನು – ಸರಳ ಪದ ಪ್ರಯೋಗವನ್ನು – ಕಲ್ಪಿಸಿಕೊಳ್ಳಿ. ಅವು ಶೃಂಗಾರಕ್ಕಾಗಿ ಅಲ್ಲ – ಪುನರಾವರ್ತಿತವಾಗುವುದಿಲ್ಲ. ದೃಶ್ಯ ಕಾವ್ಯದಿಂದ ಹೇಳಲಾಗದನ್ನು ಹೇಳುವುದಕ್ಕೆಂದ ಬಳಸಿದಪದಗಳು ಇಲ್ಲಿ ಬಳಸುವ ಶೈಲಿ – ಧ್ವನಿದಾನಿಯ ಏರಿಳಿತಗಳು ಮುಖ್ಯವಾಗುತ್ತದೆ. ಒಂದು ಗುಡಿಗೆ ಹೋಗುತ್ತಿರುವ ಜನರ ದೃಶ್ಯ ಪರದೆಯ ಮೇಲಿದ್ದಾಗ – ಆ ಜನ ಗುಡಿಗೆ ಹೋಗುತ್ತಿದ್ದಾರೆ ಎಂಬ ವಿವರಣೆ ಬೇಕಾಗುವುದಿಲ್ಲ.



ಸ್ವರ್ಣ ಮಹಲ್ ರಹಸ್ಯ : ಮಂಜುಳಾ, ಅಶೋಕ್, ಸುಂದರಕೃಷ್ಣ ಅರಸ್, ಗಿರೀಶ್ ಮತ್ತು ಬೇಬಿ ರೇಖಾ.

ಆದರೆ ಯಾಕೆ ಹೋಗುತ್ತಿದ್ದಾರೆ ಎಂಬ ವಿವರಣೆ ಬೇಕು.

ಚಿತ್ರಕಥಾ ಲೇಖಕನ ಸಂಕಲನ ಪರಿಚಯ ಇನ್ನೊಂದು ಮುಖ್ಯಾಂಶ. ಇಡೀ ಚಿತ್ರದ ಓಘ ಸಂಕಲನದ ಮೇಲೆ ನಿಂತಿದೆಯಾದ್ದರಿಂದ ಚಿತ್ರದ ಒಟ್ಟಾರೆ ಪರಿಣಾಮ ಸಂಕಲನವನ್ನು ಅವಲಂಬಿಸಿದೆ.

## ಗತಿ ಮತ್ತು ಚಲನೆ:

ಕವನ, ಕವಿತೆ, ಪ್ರಬಂಧ, ಕತೆ, ಕಾದಂಬರಿ ಈ ಎಲ್ಲಕ್ಕೂ ಒಂದು ರಚನಾ ಗತಿ ಇರುತ್ತದೆ. ಇವು ಅವಸರದ, ನಿಧಾನದ - ಸೂಕ್ಷ್ಮ - ನವಿರೇಳಿಸುವ - ಶಕ್ತಿಯುತ ಅಂಶಗಳನ್ನು ಹೊಂದಿರುತ್ತವೆ. ಇಂಥವು ಕಿರುಚಿತ್ರಗಳಲ್ಲೂ ಇರಬೇಕು. ಇಂಥ ವೈವಿಧ್ಯವಿಲ್ಲದಿದ್ದರೆ 'ಚಲನ' ಚಿತ್ರ ವೈವಿಧ್ಯಮಯವಾಗುವುದಿಲ್ಲ.

ಚಿತ್ರಕಥೆ ರಚನೆಯ ಮುಂಚೆ ಈ ಅಂಶ ಕುರಿತು ಲೇಖಕ ಯೋಚಿಸಬೇಕು. ಚಿತ್ರದ ಆರಂಭ ಹೇಗೆ? ಉದ್ರೇಕಕಾರಿಯೆ? ಶಾಂತಿಯುತವೆ? ಗೊಂದಲವೆ? ನಿಶ್ಶಬ್ದವೆ? ನಂತರ ಹೇಗೆ? ಚಿತ್ರದ ಪರಾಕಾಷ್ಠೆ ಎಲ್ಲಿ? ಹೇಗೆ? ಚಿತ್ರದಲ್ಲಿ ನೆನಪುಗಳುಂಟೆ (Flash Back)? ಇಂಥ ಹಲಪ್ರಶ್ನೆಗಳಿಗೆ ಉತ್ತರ ಸಿದ್ಧಪಡಿಸಿಕೊಳ್ಳಬೇಕು.

ಅನುಭವ ಮತ್ತು ಕಲ್ಪನಾ ಕಣ್ಣುಗಳು - ಚಿತ್ರಕಥಾ ಲೇಖಕ ಏಕತಾನತೆಯನ್ನು ಮೀರಿದ ಚಿತ್ರವೊಂದನ್ನು ಮಾಡುವಲ್ಲಿ ಸಹಾಯಕವಾಗುತ್ತವೆ. ಅವನ ಒಳಗಣ್ಣು ಗತಿ ಮತ್ತು ಚಲನೆಯನ್ನು ಪ್ರತಿ ದೃಶ್ಯವನ್ನು ನಿರ್ಧರಿಸುವಲ್ಲಿ ಉಪಯುಕ್ತವಾಗುತ್ತದೆ. ಗತಿ ಸಂಗೀತಕ್ಕೆ ಅತ್ಯಂತ ಮುಖ್ಯ ಅಂಶ. ಸಂಗೀತದಂತೆ ಚಲನಚಿತ್ರಕ್ಕೂ ಪದಬಂಧ, ಪುನರಾವರ್ತಿತ ಪದಗಳು - ಪ್ರಾಸಗಳು ಇರಬೇಕು. ಸಂಕಲನ ಗತಿಯನ್ನು ನಿರ್ಧರಿಸುವ ಮುಖ್ಯ ಅಂಗ. ಚಿತ್ರದ ಕಥೆ ಗತಿ ನಿರ್ಧಾರಕ ಅಂಶಗಳಲ್ಲೊಂದು. ಸಂಕಲನವನ್ನು ಅವನ ಕಲ್ಪನೆಗೆ ತಕ್ಕಂತೆ ದುಡಿಸಿಕೊಳ್ಳುವ ಶಕ್ತಿ ಸ್ವತಃ ಸಂಕಲನದ ಅನುಭವವುಳ್ಳವನಿಗೆ ಮಾತ್ರ ಇರುತ್ತದೆ.

ಇಡೀ ಚಿತ್ರದ ಒಟ್ಟು ಪರಿಣಾಮಕ್ಕೆ ಲೇಖಕ ಜವಾಬ್ದಾರನಲ್ಲ. ಆದರೆ ಪರಿಣಾಮ ಎನಿಸುವ ಎಲ್ಲ ವಿಧಾನಗಳಲ್ಲೂ ಪರಿಚಯ ಹೊಂದುವುದು ಉತ್ತಮ. ಇತ್ತೀಚೆಗೆ ಚಲನ ಚಿತ್ರರಂಗದಲ್ಲಿ ತನ್ನದೇ ಆದ 'ಸ್ವಾತಂತ್ರ್ಯ' ಬೆಳೆಯುತ್ತಿದೆ. ಚಿತ್ರ -ತಯಾರಿಕೆಗೆ ಕಟ್ಟುನಿಟ್ಟಾದ ನಿರ್ಧಾರಗಳಿಲ್ಲ. ಪ್ರತಿಯೋರ್ವನೂ ಚಿತ್ರದ ಒಟ್ಟು ಪರಿಣಾಮಕ್ಕೆ ಬೇಕಾಗುವಂತೆ ದುಡಿಯುತ್ತಾನೆ. ಪರಿಣಾಮಕಾರಿ ಎನಿಸಿದ್ದು – ಎಲ್ಲರಿಗೂ ಒಪ್ಪಿತವಾದದ್ದು ಉಳಿಯುತ್ತದೆ. ಇಲ್ಲಿ ಎಲ್ಲರ ಕಲ್ಪನೆಗೂ ಸ್ವಾತಂತ್ರ್ಯವಿದೆ. ಈಗ ಎಲ್ಲ ನಿರ್ಧಾರಗಳೂ ಲೇಖಕನ ಜವಾಬ್ದಾರಿಯಲ್ಲದಿದ್ದರೂ ಒಟ್ಟು ಪರಿಣಾಮಕ್ಕೆ ಒಳ್ಳೆಯ ಸಲಹೆಗಳನ್ನು ಅವನು ಆಲೋಚಿಸಬೇಕು. ಇದರಿಂದ ಬರಿಯ ಸಂಭಾಷಣೆ, ಸಂಶೋಧನೆ, ಕಥೆ, ಇಷ್ಟೆ ಅಲ್ಲದೆ ಇನ್ನಿತರ ವಿಷಯಗಳನ್ನು ಕುರಿತು ಚಿಂತಿಸುವುದು ಕೂಡ ಸಾಧ್ಯವಾಗುತ್ತದೆ.

## ಪ್ರೇಕ್ಷಕ ಪ್ರದರ್ಶಕ ಮತ್ತು ಪ್ರದರ್ಶನ

ಚಿತ್ರ ನೋಡುವುದು ಒಂದು ಸಮುದಾಯ. ಒಬ್ಬಾತ ಸಮುದಾಯದೊಂದಿಗೆ ನೋಡಿದ ಮನರಂಜನೆ ಯಾ ಸಾಕ್ಷ್ಯ ಯಾ ಇನ್ಯಾವುದೇ ರೀತಿಯ ಚಿತ್ರಕ್ಕೆ ಸಾಮುದಾಯಿಕವಾಗಿ ಸ್ಪಂದಿಸುತ್ತಾನೆ. ಇಡೀ ಸಮುದಾಯ ಕಳೆಯುವ ನಿಮಿಷಗಳು, ಮನರಂಜನೆ, ಸಂತೋಷ ಒಂದೇ ಆಗಿರುತ್ತದೆ. ಅಂದರೆ ಚಿತ್ರದ ಬಗೆಗೆ ಎಲ್ಲರ ಅಭಿಪ್ರಾಯವೂ ಒಂದೇ ಎಂದಲ್ಲ. ಅವರೆಲ್ಲರೂ ಕಳೆದ ಸಮಯ, ಪಡೆದ ಅನುಭವ ಒಂದೇ ಆದರೂ ಅವರ ಪ್ರತಿಕ್ರಿಯೆಗಳು – ಅಭಿಪ್ರಾಯಗಳು ಬೇರೆ ಬೇರೆಯಾಗಿಯೇ ಉಳಿಯುತ್ತದೆ. ಇಂಥ ಸಾಮುದಾಯಿಕ ಅನುಭವ ಕುರಿತು ಚಿತ್ರಕಥಾ ಲೇಖಕ ತಿಳಿದಿರಬೇಕು. ಬೇರೆ ಬೇರೆ ರೀತಿಯ ಪ್ರೇಕ್ಷಕರನ್ನ ಅರ್ಥ ಮಾಡಿಕೊಳ್ಳಬೇಕು. ಅವರ ಪ್ರತಿಕ್ರಿಯೆ ಕುರಿತು ಕುತೂಹಲ ಬೆಳೆಸಿಕೊಳ್ಳಬೇಕು.

ಚಿತ್ರ ನೋಡುವುದು ಒಂದು ಅನುಭವ. ಈ ಅನುಭವವನ್ನುಂಟುಮಾಡುವ 'ನಾಡಿ ಬಡಿತ'ವನ್ನು ಅರಿತವ ಗೆಲ್ಲುತ್ತಾನೆ. ಕೆಲವು ಹೆಸರಾಂತ ರಾಜಕಾರಣಿಗಳು, ಸಂಗೀತಗಾರರು, ನಟರು ಇಂಥ ನಾಡಿಯನ್ನು ತಿಳಿದಿರುವುದರಿಂದ ಗೆಲ್ಲುತ್ತಾರೆ. ಇಂಥ 'ನಾಡಿ'ಯ ಸ್ಪಷ್ಟ ಪರಿಚಯ ಉಳ್ಳವನನ್ನು ಪ್ರದರ್ಶಕ ಎನ್ನುತ್ತಾರೆ. ಅಂಥವನು ಮಾಡಿದ ಪ್ರಯತ್ನಗಳು ಯಶಸ್ವಿಯಾಗುತ್ತವೆ. ಯಾವುದೋ ನೀರಸ ವಿಷಯಗಳನ್ನು ಕೂಡ ರಸಭರಿತವನ್ನಾಗಿಸುವ ಕೈಚಳಕ ಇವರಿಗಿರುತ್ತದೆ. 'ಸಕ್ಕರೆ ಇದ್ದರೆ

(63ನೇ ಪುಟಕ್ಕೆ)





ಮುಖ್ಯಮಂತ್ರಿ ನಿಧಿಗೆ ಸರೋಜಾದೇವಿಯವರಿಂದ ಚೆಕ್ ನೀಡಿಕೆ.





ಸಭೆಗೆ ಆಗಮಿಸಿದ ನಟನಟಿಯರು.

# ಗುರು
# ಬತ

ಅದ್ದೂರಿಯ ಸಮಾರಂಭ – ಉಳಿದೆಲ್ಲಕ್ಕಿಂತ ಕೊಂಚ ಶಿಸ್ತಿತ್ತು – ಗದ್ದಲ ಗೌಜಿ ಇರಲಿಲ್ಲ. ಭಾರತಿ ಅವರ ಮುದ್ದು ಮಾತೂ – ಕೊಂಚ ಹೆಚ್ಚೆನಿಸಿದ ಪತಿ ಪ್ರೇಮ ಪ್ರದರ್ಶನ. ರವಿ ಅವರು ಉತ್ತರಾರ್ಧದಲ್ಲಿ ಸರಸರನೆ ಪಟ್ಟಿ ಓದಿದರು. ಹೆಚ್ಚಿನ ಸಂಖ್ಯೆಯಲ್ಲಿ ಚಿತ್ರದಲ್ಲಿ ಭಾಗವಹಿಸಿದವರು ಮಾತ್ರವಲ್ಲದೆ ಇತರ ನಟನಟಿಯರೂ ಭಾಗವಹಿಸಿದ್ದು ವಿಶೇಷ. ಹಿಡಿ ಸೊಂಟದವರಿಂದ ಬಳುಕಲಾಗದ ಬಾಗಲಾಗದ ನಟಿಯರೂ ಸೇರಿದಂತೆ ವೇದಿಕೆಗೆ ಬಂದು ಸ್ವಹಸ್ತೇ ಮಂತ್ರಿಗಳಿಗೆ ಮರ್ಯಾದೆ ಸಲ್ಲಿಸಿದರು. ಪುಳಕಿತರಾದ ಮುಖಭಾವ.

ಸ್ವಾಗತ ಭಾಷಣ ಮಾಡಿದ ವೇದಪ್ರದ ಸಂಸ್ಥೆಯ ಗಿಳಿಯೊಂದು ಪೂರ್ಣ ತೆರಿಗೆ ವಿನಾಯತಿ ಕೊಡಿ – ಕರ್ನಾಟಕ ಬಿಟ್ಟು ಹೊರಗೇ ತಯಾರಾದ ಚಿತ್ರಕ್ಕೂ ತೆರಿಗೆ ವಿನಾಯಿತಿ – ಸಬ್ಸಿಡಿ ಕೊಡಿ ಅಂತ ಮುದ್ದುಗರೆಯಿತು.

ಒಗ್ಗಟ್ಟಿನಲ್ಲಿ ಬಲವಿದೆ. ಹೊಡೆದಾಡಬೇಡ ಅಸೂಯೆ ಬೇಡ ಎಂಬೆಲ್ಲ ಪ್ರಾಥಮಿಕ ಪಾಠವನ್ನು ತಲೆಗಿಳಿಸಲು ವೃಥಾ ಶ್ರಮಿಸಿದರು ಮುಖ್ಯಮಂತ್ರಿಗಳು. ಜೊತೆಗೆ ರಾಷ್ಟ್ರೀಕರಣದಿಂದಾಗುವ ಅನಾಹುತವನ್ನು ಹೇಳಿದರು. ಚಪ್ಪಾಳೆಯ ಸುರಿಮಳೆ ಗಿಟ್ಟಿಸಿದರು.





ಜಯಲಲಿತಾರಿಂದ ಹಾರದ ಬದಲು ಶಾಲು ಗುಂಡೂರಾವ್‌ಗೆ

# ...ಷ್ಸಾರು
## ...ೀತ್ಸವ



ಸನ್ಮಾನಿತರ ಪರವಾಗಿ ಮಾತನಾಡಿದ ಶಿವರಾಂ ಅವರು ನಮ್ಮನ್ನು ಹತ್ತಿರಗೊಂಡು – ನಮಗಾಗಿ ಕಾಳಜಿವಹಿಸಿ – ನಮ್ಮನ್ನು ಅರ್ಥಮಾಡಿಕೊಂಡಿರೋ ಸರ್ಕಾರ – ಇದು ಸೌಭಾಗ್ಯ – ಈಗಿವರು ಹಿಂದಿನ ಹಾಗೆ ಅಲ್ಲ. ಸುಲಭಸಾಧ್ಯರು (ಸಿನಿಮಾ ಜನರು!) ಅನ್ನುತ್ತ – ಇಷ್ಟು ನೆರವಿದ್ದು ಫಲ ಇಲ್ಲ – ಕನ್ನಡಿಗರಲ್ಲಿ ಅಭಿಮಾನ ಕುಂದಿದೆ (ಚಿತ್ರ ನಿರ್ಮಾಣ ಮಾಡುವ ಜನಕ್ಕೋ– ಪ್ರೇಕ್ಷಕನಿಗೋ!) ಎನ್ನುತ್ತ – ಹೊರಾಂಗಣ ಚಿತ್ರೀಕರಣಕ್ಕೆ ಇರುವ ತೊಂದರೆ ಹೇಳಿ ಸರಿಪಡಿಸಬೇಕು ಅಂದರು.

ದ್ವಾರಕೀಶರಂತೂ ಲುಟಪುಟು ಓಡಾಡಿ ಇಷ್ಟು ಜನದ ಅಭಿಮಾನ ಇದೆ. ಚಿತ್ರ ಮಾಡಲ್ಲ ಅಂದರೆ ವಾಪಸ್ ತಗೋತೀನಿ – ಖಂಡಿತಾ ಚಿತ್ರ ಮಾಡ್ತೀಸಿ ಅಂತ ಡಂಗುರಿಸಿಬಿಟ್ಟರು. (ಅಯ್ಯೋ ಬಡಪಾಯಿ ಕನ್ನಡಿಗ ಇನ್ನೆಷ್ಟು ರೀಮೇಕ್‌ಗಳಿಗೆ ನಿನ್ನ ಬಲಿಯೊ!)

ಅಧ್ಯಕ್ಷ ಮೊಯ್ಲಿಯವರ ಪರಿಶ್ರಮ ಇದ್ದಾಗ ಯಶಸ್ಸು ಅನ್ನುತ್ತಾ ಕನ್ನಡ ಚಿತ್ರ ನೂರು ದಿನ ಯಾಕೆ 200 ದಿನದಷ್ಟು ಸಹ ಓಡಲಿ ಎಂದಾಗ ಪ್ರೇಕ್ಷಕರು ಬಾಗಿಲ ಕಡೆಗೆ ಸರಿದಿದ್ದರು!

●

ಫೋಟೋ: . ವಿಶ್ವನಾಥ್



ಮೊಯ್ಲಿಯವರಿಗೆ ಲಕ್ಷ್ಮಿ ಶಾಲು ಹೊದಿಸಿದರು.



# ಇತ್ತೀಚೆಗೆ ಉದುರಿದ ಹೂಗಳು

## ಕನ್ನದಾಸನ್

ತಮಿಳು ಚಿತ್ರರಂಗಕ್ಕೆ ರಾಜಕೀಯದೊಡನೆ ಇರುವ ನಂಟು ಸುಪ್ರಸಿದ್ಧ. ಅಲ್ಲಿನ ಪ್ರಸಿದ್ಧ ನಟ ನಿರ್ಮಾಪಕನೇ ರಾಜ್ಯದ ಆಡಳಿತ ಸೂತ್ರಗಳನ್ನು ಹಿಡಿದಿದ್ದಾನೆಂದ ಮೇಲೆ ಬೇರೆ ಮಾತುಂಟೆ!

ರಾಜಕೀಯ ಮಾತ್ರವಲ್ಲ. ಸಾಹಿತ್ಯ ಕೂಡ ಅಲ್ಲಿನ ಸಿನಿಮಾ ಮಾಧ್ಯಮಕ್ಕೆ ಸಲ್ಲಿಸಿದ ಕೊಡುಗೆ ಅಪಾರ. ಚಿತ್ರಗಳಿಗೆ ಕಥಾವಸ್ತು ಹಾಗೂ ಗೀತೆಗಳು ಸಾಹಿತ್ಯರಂಗದ ಖ್ಯಾತನಾಮರಿಂದ ಒದಗುವುದು ಎಲ್ಲ ಕಡೆಗಳಲ್ಲಿಯೂ ಇದ್ದದ್ದೇ. ಆದರೆ ತಮಿಳಿನಲ್ಲಿ ಮಹಾಕವಿಯೆನಿಸಿದವರೊಬ್ಬರು ಅಲ್ಲಿನ ಚಿತ್ರಗಳಿಗೆ ಸಾವಿರಗಟ್ಟಲೆ ಹಾಡುಗಳನ್ನು ಒದಗಿಸಿದ್ದು ಮಾತ್ರ ಸಾಧಾರಣದ ವಿಷಯವಲ್ಲ.

ಇತ್ತೀಚೆಗೆ ತನ್ನ 54ನೆಯ ವಯಸ್ಸಿನಲ್ಲಿ ಚಿಕಾಗೋನಲ್ಲಿ ನಿಧನರಾದ ಕನ್ನದಾಸನ್ ತಮಿಳಿನ ಶ್ರೇಷ್ಠ ಕವಿಗಳಲ್ಲೊಬ್ಬರು. ಸುಬ್ರಹ್ಮಣ್ಯ ಭಾರತಿ, ದೇಶಿಕ ವಿನಾಯಕಂ ಪಿಳ್ಳೆ, ಭಾರತಿದಾಸನ್, ಕನ್ನದಾಸನ್... ಹೀಗೆ ಆ ಪಟ್ಟಿ ಬೆಳೆಯುತ್ತದೆ.

ಕನ್ನದಾಸನ್ ಐದು ಸಾವಿರಕ್ಕೂ ಹೆಚ್ಚು ಗೀತೆಗಳನ್ನು ರಚಿಸಿದ್ದಾರಂತೆ. ಅವರ ಹಾಡುಗಳನ್ನು ಬಳಸಿಕೊಳ್ಳದಿರುವ ನಟ ನಟಿಯರಿಲ್ಲ, ಸಂಗೀತ ನಿರ್ದೇಶಕರಿಲ್ಲ – – ತಮಿಳು ಚಿತ್ರಪ್ರಪಂಚದಲ್ಲಿ. ಸರಳವಾದ ಮನ ಮುಟ್ಟುವ ಭಾಷೆ ಕನ್ನದಾಸನ್ ಹಾಡುಗಳ ವೈಶಿಷ್ಟ್ಯ.

ಸಾವಿರಗಟ್ಟಲೆ ಹಾಡುಗಳನ್ನು ರಚಿಸಿದ್ದಲ್ಲದೆ ಕಾದಂಬರಿ, ಸಣ್ಣಕತೆ, ಪ್ರಬಂಧಗಳೆಂದು ಸುಮಾರು ನೂರು ಇತರ ಗ್ರಂಥಗಳನ್ನೂ ರಚಿಸಿದ್ದಾರೆ ಕನ್ನದಾಸನ್. ವೇದೋಪನಿಷತ್ತುಗಳ ತಿರುಳನ್ನು ಸರಳವಾಗಿ ನಿರೂಪಿಸಿರುವ ಅವರ 'ಅರ್ಥಮುಳ್ಳ ಹಿಂದೂ ಮತಂ' ಎಂಬ ಕೃತಿ ತುಂಬ ಆದರಣೀಯವೆನಿಸಿದೆ. ಸಾಹಿತ್ಯ ಅಕಾಡೆಮಿ ಪುರಸ್ಕಾರವಲ್ಲದೆ ಸಿನಿಮಾ ಹಾಗೂ ಸಾಹಿತ್ಯರಂಗ ಹಲವು ಗೌರವಗಳು ಅವರಿಗೆ ಲಭಿಸಿದೆ.

ವಿಭಿನ್ನ ರಾಜಕೀಯ ದೃಷ್ಟಿಯವರೆಂದು ಸ್ಪಷ್ಟವಿದ್ದರೂ ತಮಿಳುನಾಡಿನ ಮುಖ್ಯಮಂತ್ರಿ ಎಂ.ಜಿ.ಆರ್. ಅವರು 1978ರಲ್ಲಿ ಕನ್ನದಾಸನ್ ಅವರನ್ನು ರಾಷ್ಟ್ರಕವಿಯೆಂದು ಮನ್ನಣೆ ಸಲ್ಲಿಸಿದರು.

ಜನಸಾಮಾನ್ಯರ ಹೃನ್ಮನಗಳನ್ನು ತಣಿಸಿ ಧೈರ್ಯ ತುಂಬುವ ಗುಣ ಇರುವುದರಿಂದ ಕನ್ನದಾಸನ್ ಗೀತೆಗಳನ್ನು ಅಲ್ಲಿನ ಜನತೆ ಮರೆಯುವಂತಿಲ್ಲ.

ನಿರ್ದಾಕ್ಷಿಣ್ಯ ಪ್ರವೃತ್ತಿಯ ಕನ್ನದಾಸನ್ ಗೌರವಕ್ಕಿಂತ ಪ್ರೀತಿಗೆ ಹೆಚ್ಚು ಬೆಲೆಕೊಡುತ್ತಿದ್ದರು. ●

– ವಿಹಂಗಮ



## ಸಾವಿತ್ರಿ ಇನ್ನಿಲ್ಲ

ಕನ್ನಡ ಚಿತ್ರವೊಂದರಲ್ಲಿ ನಟಿಸಲು ಒಂದೂವರೆ ವರ್ಷಗಳ ಕೆಳಗೆ ಬೆಂಗಳೂರಿಗೆ ಬಂದಿದ್ದಾಗ ಹಠಾತ್ ಅಸ್ವಸ್ಥತೆಗೊಳಗಾದ ನಟಿ ಸಾವಿತ್ರಿ ಆಸ್ಪತ್ರೆಗೆ ಸೇರಿದವರು ಮತ್ತೆ ಚೇತರಿಸಿಕೊಳ್ಳಲೇ ಇಲ್ಲ. ಆಸ್ಪತ್ರೆಗೆ ಸೇರಿದಾಗ ಹೋದ ಪ್ರಜ್ಞೆ ಕೊನೆಯುಸಿರೆಳೆಯುವವರೆಗೂ ಮರಳಲಿಲ್ಲ. ಮಧ್ಯೆ ವೈಮನಸ್ಸಿನಿಂದಾಗಿ ದೂರಾಗಿದ್ದ ಪತಿ ಜೆಮಿನಿ ಗಣೇಶನ್ ಧಾವಿಸಿ ಬಂದು ಪತ್ನಿಯನ್ನು ಮದ್ರಾಸಿಗೆ ಕೊಂಡೊಯ್ದು ಕೊನೆಯ ತನಕವೂ ಆದರಿಸಿದ್ದು ಅವರಿಬ್ಬರೂ ಅಂತರಂಗಿಕವಾಗಿ ಎಷ್ಟೊಂದು ಪ್ರೀತಿಸುತ್ತಿದ್ದರೆನ್ನುವುದರ ಸಂಕೇತ. ಅವರಷ್ಟೇ ಏಕೆ ಈ ಅಭಿಜಾತ ನಟಿಗೆ ಅಪಾರ ಅಭಿಮಾನೀ ಬಳಗವಿತ್ತೆನ್ನುವುದಕ್ಕೆ ಆಕೆಯ ಚೇತರಿಕೆಯನ್ನು ಹಾರೈಸಿ ಬಂದ ಲಕ್ಷ ಪತ್ರಗಳೇ ಸಾಕ್ಷಿ. ಅವೆಲ್ಲವನ್ನೂ ದೇವರ ಮುಂದಿಟ್ಟು ಆಕೆಯನ್ನು ಬದುಕಿಸುವಂತೆ ಗಣೇಶನ್ ಪ್ರಾರ್ಥಿಸಿದ್ದರಂತೆ.

150ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದ ಸಾವಿತ್ರಿ ಮರೆತ ಪಾತ್ರಗಳಿಗೆ ಎತ್ತಿದ ಕೈಯಾಗಿದ್ದರು. ಮೂರು ನಾಲ್ಕು ಕನ್ನಡ ಚಿತ್ರಗಳಲ್ಲಿಯೂ ಅಭಿನಯಿಸಿದ್ದ ಅವರು ಚತುರ್ಭಾಷಾ ನಟಿ. ದೇವದಾಸ್, ಮೂಗಮನಸುಲು, ಡಾ। ಚಕ್ರವರ್ತಿ ಮುಂತಾದ ಚಿತ್ರಗಳು ಆಕೆಯ ಪ್ರತಿಭೆಯ ಮೈಲಿಗಲ್ಲುಗಳು. ●



ಹಾವು ಏಣಿಯಾಟ : ಆರತಿ, ಅನಂತನಾಗ್

1981ರಲ್ಲಿ ಕನ್ನಡ ಚಿತ್ರರಂಗ] [ವಿಜಯಾ

# ಸಂಖ್ಯೆ ಅಪಾರ, ಸಾಧನೆ ತತ್ವಾರ

'ರಾಘವೇಂದ್ರ ವೈಭವ'ದಿಂದ ಆರಂಭವಾದ ಎಂಬತ್ತೊಂದರ ಚಿತ್ರರಂಗ ಅಷ್ಟೇನೂ ವಿಶೇಷ ಕಂಡುಕೊಂಡಿಲ್ಲ. ಮೊದಲ ಚಿತ್ರ ಪ್ರಶಸ್ತಿ ಪಡೆದುಕೊಂಡ ವಿಶೇಷ ಬಿಟ್ಟರೆ ಚಿತ್ರವೂ ಅಂಥ ಅದ್ಭುತ ಅನ್ನಿಸಿಕೊಳ್ಳಲಿಲ್ಲ.

ಹೊಸ ನಿರ್ದೇಶಕ – ನಿರ್ಮಾಪಕರನ್ನು ಕೊಟ್ಟ ಈ ಚಿತ್ರದ ಫಲಿತಾಂಶದಿಂದಾಗಿ ಆ ಇಬ್ಬರೂ ತಟಸ್ಥರಾದರು. ಸುದ್ದಿ ಸದ್ದಿಲ್ಲದೇ ಅಡಗಿತು. ಈ ಚಿತ್ರದಲ್ಲಿ ಪಾತ್ರದಲ್ಲಿ ಅಪರಿಮಿತ ನಿಷ್ಠೆ ವಹಿಸಿ, ಅಷ್ಟೇ ಪ್ರಚಾರವನ್ನು ಪಡೆದಿದ್ದ ಶ್ರೀನಾಥ್ ನಿಜಕ್ಕೂ ಉತ್ತಮ ನಟ ಎನ್ನಿಸಿಕೊಂಡರು. ತೀರಾ ವಿಭಿನ್ನವಾದ ಅನೇಕರ ಕುತೂಹಲಕ್ಕೆ ಕಾರಣವಾಗಿದ್ದ ಈ ಪಾತ್ರಕ್ಕೆ ಹೆಚ್ಚು ಅನ್ಯಾಯ ಆಗಿರಲಿಲ್ಲ. ಶ್ರೀನಾಥ್ ಅವರ ಅಭಿನಯದ ಹಲವು ಚಿತ್ರಗಳು ಬಿಡುಗಡೆಯಾದವು. ತೀರಾ ಹಳೆಯ ಚಿತ್ರಗಳೂ ಬಿಡುಗಡೆಯಾಗಿ ಒಂದರ ಮಧ್ಯೆ ಇನ್ನೊಂದಕ್ಕೆ ಹೆಚ್ಚು ಅಂತರವೂ ಇಲ್ಲದಾಗಿ ಅವರಿಗೆ ಅವರೇ ಪ್ರತಿಸ್ಪರ್ಧಿಯಾಗುವಂತಹ – ಹಾಗೂ ಹಳೇ ಚಿತ್ರಗಳಲ್ಲಿಯ ದೋಷಗಳು ಕಾರಣವಾಗಿ ಕೊಂಚಮಟ್ಟಿಗೆ ಶ್ರೀನಾಥ್‌ಗೆ ಅನಿವಾರ್ಯವಾದ ಸೋಲುಗಳು ಎದುರಾದವು, ಆತ ತಾನೇ 'ಶಿಕಾರಿ'ಯಂಥ ಚಿತ್ರ ನಿರ್ಮಿಸಿ ವಿಭಿನ್ನ ಬಗೆಯ ಪಾತ್ರ - ಅಭಿನಯ ತರಲೆತ್ನಿಸಿದರು. ಅವು ಹೊಸದಲ್ಲ ಎನ್ನುವಂತಿಲ್ಲವಾದರೂ ಕನ್ನಡದ ಪ್ರೇಕ್ಷಕ ಇನ್ನೂ ರೋಚಕವೆನಿಸುವ ಕತೆಗೇ ಅಂಟಿಕೊಂಡವನಾಗಿದ್ದರಿಂದ 'ಶಿಕಾರಿ'ಯ ಮಾಮೂಲೀ ಕಥೆ ಪ್ರಿಯವಾಗದೇ ಉಳಿಯಿತು. ಅನೇಕ ವೈಶಿಷ್ಟ್ಯಗಳು ಮರೆಯಾದವು. ಶ್ರೀನಾಥ್ ಈ ವರ್ಷ ಮೌನವಾಗಿರದೆ ಮಾತಾಡತೊಡಗಿದರು. ಕೃಷ್ಣರಾಜು ಅವರೊಂದಿಗಿನ ವಿವಾದಕ್ಕೆ ತೀರಾ ನೇರವಾದ ಉತ್ತರ ಕೊಟ್ಟಿದ್ದಲ್ಲದೆ – ಕ್ರಮಬದ್ಧವಾಗಿ ನಡೆದುಕೊಂಡರು. 'ತಾರೆ'ಯರಿಗೆ ತೀರಾ ಅಪರೂಪ ಈ ಸ್ವಭಾವ. ಶ್ರೀನಾಥ್ ಅವರು 'ಪ್ರೇಮ ಪಲ್ಲವಿ'ಯಲ್ಲಿ ಮುಗ್ಧ ಹಳ್ಳಿಗನಾಗಿ ನಟಿಸಿದ್ದು 'ಹುಡುಗಾಟದ ಹುಡುಗಿ'ಯ ಛಾಯೆ ಇದ್ದರೂ ಪ್ರಿಯವೆನಿಸುವಂಥದಾಗಿತ್ತು. ಒಟ್ಟಾರೆ ಹೇಳುವುದಾದರೆ ವರ್ಷದಲ್ಲಿ ಹೆಚ್ಚು ಸುದ್ದಿ-ಕೆಲಸ ಎಲ್ಲಕ್ಕೂ ಶ್ರೀನಾಥ್ ಮುಖ್ಯರು.

ಈ ವರ್ಷ ಬಂದ ಎರಡು ಮಕ್ಕಳ ಚಿತ್ರಗಳೂ ಹೆಚ್ಚು ಯಶಸ್ವಿಯಾಗಲಿಲ್ಲ. ರಾಜೇಂದ್ರಸಿಂಗ್ ಬಾಬು ಅವರ ಸಿಂಹದ ಮರಿಸೈನ್ಯ ತಾಂತ್ರಿಕ ಕಸರತ್ತನ್ನ ಮಾಡಿದ್ದರೂ ಎಳೆದು ತಂದ ಘಟನೆ – ಪಾತ್ರಗಳು ಇತ್ಯಾದಿ ವಿಚಿತ್ರವಾಗಿ ತುರುಕಿದಹಾಗಾಗಿ ಚಿತ್ರ ಮಕ್ಕಳಿಗೆ ಎಂಬುದನ್ನು ಮರೆತರೋ ಅನ್ನಿಸಿತ್ತು. ಬಾಲಾಜಿಸಿಂಗ್ ನಿರ್ಮಿಸಿ ಗೀತಪ್ರಿಯ ನಿರ್ದೇಶಿಸಿದ ಪ್ರಚಂಡ ಪುಟಾಣಿಗಳು ಸಹ ಸರಳವಾದರೂ ಮತ್ತೆ ಸವಕಲು ತಂತ್ರ - ಕತೆಯಿಂದಾಗಿ ಸೊರಗಿತು. ಈ ಎರಡು ಚಿತ್ರತಂಡ ಪರಸ್ಪರ ಅಸಹಕಾರ ಪ್ರತಿಸ್ಪರ್ಧೆ ನಡೆಸಿ ತೊಂದರೆಗಳನ್ನು ತಂದುಕೊಂಡವು. 'ಭಾಗ್ಯವಂತ'ದಂಥ ಚಿತ್ರ ಎಳೆಯನೇ ನಾಯಕ – ಕೇಂದ್ರ ಪಾತ್ರವಾಗಿದ್ದರೂ – ಅಲ್ಲಿಯ ವಿಚಾರಗಳು ದೊಡ್ಡವರಿಗಾಗಿ ಇದ್ದವು. ಹೆಚ್ಚು ಯಶಸ್ಸು ಗಳಿಸಿದ ಚಿತ್ರವೂ ಹೌದು. ರಾಜಕುಮಾರ್ ಅವರ ಮಗನಾದ ಲೋಹಿತ್ ಅಭಿನಯದಿಂದ ಜನರನ್ನು ಗೆದ್ದ. ಮೂಲಭೂತವಾಗೇ ಜನಪ್ರಿಯ ತಂದೆಯ ಶ್ರೀರಕ್ಷೆ ಇರುವಾಗ – ಆತನ ಮಗನಿಗೆ ಜನಪ್ರಿಯತೆ, ನೂಕುನುಗ್ಗಲು ಸಹಜ ಹಾಗೂ ಅದು ಕಷ್ಟಸಾಧ್ಯವೂ ಅಲ್ಲ. ಆದರೆ ಅದಷ್ಟೇ ಆಗದೆ ಲೋಹಿತ್ ತನ್ನ ಸ್ವಪ್ರತಿಭೆಯನ್ನು ತೋರಿದ್ದರಿಂದಾಗಿ ಆತ ತಂದೆಯ ನೆರಳು ಮಾತ್ರ ಆಗದೆ ಸ್ವತಂತ್ರವಾಗಿ ತನ್ನ ಪ್ರತಿಭೆಯನ್ನು ಕಲಾರಂಗಕ್ಕೆ ಒಡ್ಡಿಕೊಳ್ಳಬಲ್ಲ ಶಕ್ತ ಎಂದುದನ್ನು ಸಾಕ್ಷೀಕರಿಸಿದ್ದಾನೆ. ಈ ವರ್ಷದಲ್ಲಿ ಪರಿಚಯವಾದ ಎಳೆಯ ನವೀನ್ ಸಹ ಕೊಂಚಮಟ್ಟಿಗೆ ಗಮನ ಸೆಳೆದಿದ್ದಾನೆ. ಶಕ್ತಿಪ್ರಸಾದರ ಮಗ ಅರ್ಜುನ್ ಸರ್ಜಾ ಗಮನಾರ್ಹ ಅನ್ನಿಸಿದರೂ ಏಕೋ ಹೆಚ್ಚು ಸುದ್ದಿಯಾಗದೇ ಉಳಿದುಹೋದ.

ರಾಜಕುಮಾರ್ ಅವರು ಈ ವರ್ಷವೂ ಆರಕ್ಕೆ ಹೆಚ್ಚದೆ – ಮೂರಕ್ಕೆ ತಗ್ಗದೆ ಎಂದಿನ ಧಾಟಿಯಲ್ಲಿ ಸಾಗಿದ್ದಾರೆ. ಅವರ ಮೂರೂ ಚಿತ್ರಗಳೂ ಅಪರೂಪದ ಯಶಸ್ಸಲ್ಲದಿದ್ದರೂ ಅಡ್ಡಿ ಇಲ್ಲವಾಗಿಬಿಟ್ಟವು. ಉಳಿದೆಲ್ಲ ಅನೇಕ ಕಳಪೆ ಚಿತ್ರಗಳ ನಡುವೆ ಇವರ ಚಿತ್ರಗಳಲ್ಲಿ – ಮುಖ್ಯವಾಗಿ ಅವರದೇ ಅಭಿನಯ ಅತ್ಯುತ್ತಮವಾಗಿಬಿಟ್ಟಿತು! ಇಷ್ಟಾದರೂ ಅವರು 'ಭಾಗ್ಯವಂತ'ದಲ್ಲಿ ಕಾಣಿಸಿಕೊಳ್ಳುವ ಒಂದು ಚಿಕ್ಕ ದೃಶ್ಯ ಕೊಟ್ಟಷ್ಟು ತೃಪ್ತಿಯನ್ನು ಇತರ ಚಿತ್ರಗಳು ಕೊಡಲಿಲ್ಲ. ಈ ವರ್ಷವೂ ಅವರ ಸಂಗೀತ ಜನಮನ್ನಣೆ ಗಳಿಸಿದೆ. ಸಂಗೀತ ಸಂಜೆಗಳು, ಸಡಗರ ಅವರನ್ನು ಹುರಿದುಂಬಿಸಿವೆ. ಸೊಗಸಾಗಿ ಹಾಡಿದ್ದಾರೆ. ಮುಖ್ಯವಾಗಿ ತಮ್ಮೊಳಗೆ ಹಾಡಲು ಮತ್ತೆ ಪಿ. ಬಿ. ಶ್ರೀನಿವಾಸ್‌ಗೆ ಅವಕಾಶ ಕೊಟ್ಟಿದ್ದಾರೆ. ಹೊಸ ಗಾಯಕ ಪೂರ್ಣಚಂದ್ರನನ್ನು ಎತ್ತಿಹಿಡಿದಿದ್ದಾರೆ.

ಈ ವರ್ಷ ರಾಜ್ ಅವರು ಮತ್ತೆ ಕನ್ನಡಕ್ಕೆ 'ಸರಿತಾ'ರನ್ನು ಕರೆತಂದರು. ಆಕೆಯ ಬಗ್ಗೆ ಗೌರವದ ಮಾತಾಡಿದ್ದಾರೆ. ಸರಿತಾ ಅಭಿನಯಿಸಿದ ದ್ವಿಪಾತ್ರ ಇರುವ ಚಿತ್ರ 'ಜೀವಕ್ಕೆ ಜೀವ' ಮತ್ತೊಂದು ಸೋಲಿಗೆ ಉದಾಹರಣೆ.

ಈ ವರ್ಷ ಶಂಕರ್‌ನಾಗ್‌ರಿಗೆ ಅವರ ಎಲ್ಲ ಪ್ರಯತ್ನದ ನಡುವೆಯೂ ಸೋಲುಗಳೇ ಎದುರಾದುದು ಹೆಚ್ಚು – ಅವರ ಬಿಡದ ರಂಗಭೂಮಿಯ ಗೀಳು ಅವರನ್ನು ಅತ್ತ ಒಲಿಸಿವೆ. ಹೃದಯಕ್ಕೆ ಹತ್ತಿರಾಗುವ ಚಟಕಿ ಅನ್ನಿಸುವ ನಾಟಕ – ನಾಜೂಕಾಗಿ ಕೊಡಬಲ್ಲ ಜಾಣ ಎನ್ನಿಸಿಕೊಂಡರು ಶಂಕರ್‌ನಾಗ್. ಈ ವರ್ಷ ಅವರದೇ ಚಿತ್ರಗಳು – ನಿರ್ದೇಶಕ - ನಿರ್ಮಾಪಕರಾಗಿ ಬಂದದ್ದು ಎಲ್ಲವೂ ಇದ್ದೂ ಸ್ಥಿತಿ ಉತ್ತಮ ಎನ್ನಿಸುತ್ತಿಲ್ಲ. ಅವಕ್ಕೆಲ್ಲ ಸೊಪ್ಪು ಹಾಕದ ಶಂಕರ್‌ನಾಗ್ ನಾಟಕ ಆಡುತ್ತಾರೆ – 'ಸಂಕೇತ್ ಆ್ಯಡ್ಸ್' ಆರಂಭಿಸಿದ್ದಾರೆ. ರಂಗಿನ ಲೋಕದ ರಂಗು ಎಂದಾದರೂ ತೊಳೆದಾಗ ಮಾಸಿಬಿಡಬಹುದೆಂಬ ಅರಿವು ಅವರಲ್ಲಿದೆ ಅನ್ನಿಸಿತ್ತು. ಮುನಿಯನ ಮಾದರಿ ಹೇಳಬಹುದಾದ ಚಿತ್ರ.

ಅರುವತ್ತೈದಕ್ಕೂ ಮಿಕ್ಕಿ ಬಿಡುಗಡೆಯಾದ ಚಿತ್ರಗಳಲ್ಲಿ ಈ ಬಾರಿ ಹತ್ತಕ್ಕೂ ಹೆಚ್ಚು ಕಪ್ಪು-ಬಿಳುಪು ಚಿತ್ರಗಳಿದ್ದುವು. ಬಹಳ ಹಿಂದೆಯೇ ಸಿದ್ಧವಾಗಿ – ಪ್ರಶಸ್ತಿ ಪಡೆದು ಸದ್ದು ಮಾಡಿದ್ದು 'ಗ್ರಹಣ' ಹೊರ ಪ್ರೇಕ್ಷಕನಿಗೆ ತಂದದ್ದು ಇದೇ ವರ್ಷ. ಅಪರೂಪದ ಛಾಯಾಗ್ರಹಣ ರಾಮಚಂದ್ರರದು. ಕುರುಬರ ಲಕ್ಕದಲ್ಲಿ ಎಳೆಯನೊಬ್ಬನ ಅಭಿನಯ ಸೊಗಸಾಗಿತ್ತು. ಆ ಹುಡುಗನ್ನ ಯಾರೂ ಗಮನಿಸಲೇ ಇಲ್ಲ. ಅನ್ನಿಸಿತ್ತು. ಈ ಚಿತ್ರದ ನಿರ್ದೇಶಕ ಕೃಷ್ಣಮೂರ್ತಿ ಇಂಥ ಚಿತ್ರಗಳಿಂದ ಕಹಿ ಅನುಭವಕ್ಕೆ ಬೇಸತ್ತು ಇನ್ನು ಸಾಕು ಅದಂಕೊಂಡು ವಿಭಿನ್ನ ರೀತಿಯ ಒಂದು ಅರ್ಥದಲ್ಲಿ ಅವರೊಳಗೆ 'ಒಪ್ಪಂದ' ಎನ್ನಬಹುದಾದ ನಿಲುವಿಗೆ ಬಂದು 'ರಾಗ-ತಾಳ' ನಿರ್ವಹಿಸುತ್ತಿದ್ದಾರೆ. ಆ ಮಾತಿಗೆ ಬಂದರೆ ನಾಗಾಭರಣ ಆದಿಯಾಗಿ ಎಲ್ಲರದೂ ಅದೇ ಪಾಡು. ಕೆ. ಎಂ. ಶಂಕರಪ್ಪ ಅವರ ಹಿಂದಿರುವ ಎಳೆಯ ತಂಡ ಕಟ್ಟಿಕೊಂಡು 'ರೂಪಧ್ವನಿ' ಆರಂಭಿಸಿ ಎಲ್ಲ ಬಗೆಯ



ಪ್ರಶಸ್ತಿ ಪಡೆದು, ಸದ್ದು ಮಾಡಿದ ಗ್ರಹಣ.



ವರ್ಷದ ಯಶಸ್ವೀ ಚಿತ್ರಗಳಲ್ಲೊಂದಾದ "ಭಾಗ್ಯವಂತ"ದಲ್ಲಿ ಲೋಹಿತ್, ಅಶ್ವತ್ಥ್.

ಕೆಲಸಕ್ಕೂ ನೆರವಾಗುತ್ತಿದ್ದಾರೆ. ಚಂಚಲ – ತೀರದ ಬಯಕೆ – ಛಾಯಾ – ಪ್ರಿಯತಮೆ – ಛಲಗಾರದಂಥ ಕೆಟ್ಟ ಕಪ್ಪು-ಬಿಳುಪು ಚಿತ್ರಗಳೂ ಬಂದವು. ಏನೂ ಹೇಳಲಾರದೆ ಪ್ರಿಂಟೂ ಕೆಟ್ಟು ಅಧ್ವಾನವಾದ ಇನ್ನೊಂದು ಚಿತ್ರ ಮೂರು ದಾರಿಗಳು. ಜಾಲ ಒಂದೊಳ್ಳೆಯ ಪ್ರಯತ್ನವಾಗಿದ್ದರೂ ಹೇಳುವವರಿಗೆ ಒಂದು ಕನ್‌ಸಿಸ್ಟೆನ್ಸಿ ಇಲ್ಲದೆ ಚಿತ್ರ ಇದ್ದಲ್ಲೇ ಮುರುಟಿತು.

ಹೆಸರಿಸಬಹುದಾದ ಚಿತ್ರಗಳಲ್ಲಿ ಗ್ರಹಣ, ಆಲೆಮನೆ ಮುಖ್ಯವಾಗುತ್ತವೆ. ವಿಭಿನ್ನ ಧಾಟಿಯ ಆದರೆ ಗಮನ ಸೆಳೆದ ಚಿತ್ರಗಳು. ಹಾವಿನ ಹೆಡೆಯಲ್ಲಿ ರಾಜ್ ಅವರ ಬಿಸಿ ಬಿಸಿ ಕಜ್ಜಾಯದ ಹಾಡು – ಅಭಿನಯ ಬಹಳ ಪ್ರಿಯವಾಯಿತು. ಅವರ ಕೆರಳಿದ ಸಿಂಹದಲ್ಲಿನ ಯೋಗಾಸನದ ತಂತ್ರ ಬೆಳೆಸಿ ಕಟ್ಟುಬಿಚ್ಚಿಕೊಂಡದ್ದು ಇತ್ಯಾದಿ – ತಪ್ಪುತಪ್ಪಾಗಿ ಹೇಳಿದರೂ ಸರಿ ಇವರಿಗೆ ಆಳದಲ್ಲೆಲ್ಲೋ ಇರುವ ವ್ಯವಸ್ಥೆ – ಅಲ್ಲಿ ಆಗುತ್ತಿರುವ ಅನ್ಯಾಯಗಳ ಬಗ್ಗೆ ಮನುಷ್ಯಪ್ರಯತ್ನದಲ್ಲಿ ನಂಬಿಕೆ ಹೆಚ್ಚು ಎಂಬ ಅಂಶ ಸ್ಪಷ್ಟವಾಯಿತು. ಅವರ ದೈವಭಕ್ತಿ – ಆಶ್ರಯ ಮನೋಭಾವಗಳು ಚಿತ್ರಗಳಲ್ಲಿ ಅತಿಯಾಗಿ ಒತ್ತುಕೊಟ್ಟುಕೊಳ್ಳದೆ ಇದ್ದುಹೋಗುವ ರೀತಿ ನಿಜಕ್ಕೂ ಶ್ಲಾಘನೀಯ. ಅವನವನ ನಂಬುಗೆ–ಆಸಕ್ತಿ ಅವನವನ ಒತ್ತಾಯ ಸಲ್ಲದು ಎಂಬ ನಿಯಮ ಅವರಿಗಿದ್ದರೆ ಅದು ಚಿತ್ರರಂಗದ ಹಿತದ್ದು ಮಾತ್ರ.

ತನ್ನ ಅನೇಕ ಶ್ರೇಷ್ಠತೆ – ದೃಶ್ಯ ಶ್ರೀಮಂತಿಕೆ – ನಿರ್ದೇಶಕನ ಕ್ರಿಯಾಶೀಲತೆಯನ್ನು ಪ್ರತ್ಯಕ್ಷೀಕರಿಸಿದ ರಂಗನಾಯಕಿ ತನ್ನ ನಿರೂಪಣಾ ಕ್ರಮದಲ್ಲಿ ರೂಢಿಸಿಕೊಂಡಿದ್ದ ಕ್ರಮಗಳು ಅಷ್ಟು ಪ್ರಿಯವಾಗಲಿಲ್ಲ ರಸಿಕನಿಗೆ. ಚಿತ್ರವನ್ನು ಮೆಚ್ಚುತ್ತಲೇ ಅತ್ತ ಮತ್ತೆ ಸುಳಿಯುವ ಮನಮಾಡಲಿಲ್ಲ ಆತ. ಹೀಗಾಗಿ ರಂಗನಾಯಕಿ ಹೆಚ್ಚು ಲಾಭ ತರಲಿಲ್ಲ. ಈ ಚಿತ್ರದ ವೇಳೆಯ ಸ್ನೇಹ – ಬೇರೆ ಬೇರೆ ಸಂಪರ್ಕವೋ – ಮಾನಸಿಕವಾದ ಬೇರೆ ಕಾರಣವೋ ಅಂತೂ ಆರತಿ ಅವರು ಕಣಗಾಲರನ್ನು ತಿರಸ್ಕರಿಸಿ ದೂರ ಹೋದರಂತೆ – ಇಂಥ ವಿವಾದಗಳಿಗೇ ಈ ವರ್ಷ ಹೆಸರಾಯಿತು. ತರುಣ – ಉತ್ಸಾಹಿ ಅಷ್ಟೇ ಜಾಣನೂ ಆದ ನಿರ್ದೇಶಕ ಬಾಬು ನಿರ್ದೇಶಿಸಿದ 'ಅಂತ' ಭ್ರಷ್ಟ ರಾಜಕಾರಣಕ್ಕೆ ಒಂದು ಮೇಲ್‌ಸ್ತರದಲ್ಲಿ ಕನ್ನಡಿ ಹಿಡಿಯಿತು – ಕನ್ನಡಿಯಲ್ಲಿ ಕಂಡವರು ಕಪ್ಪಾದರು. ಕೆಣಕಿದರು. ವೀಕ್ಷಣೆಗೆ ತಡೆ ತಂದರು. ಅಂತೂ ಅನೇಕ ತೊಂದರೆಗಳು ಈ 'ಪ್ರಜಾಪ್ರಭುತ್ವ'ದಲ್ಲೂ ಇದೆ ಎನ್ನುವುದು ಸ್ವತಂತ್ರ ಭಾರತದ ಸಂದರ್ಭದಲ್ಲಿ ಕೇವಲ ವಿಪರ್ಯಾಸ ಮಾತ್ರ – ಮಾತೆತ್ತಿದರೆ ಗದ್ದಲ – ಸುದ್ದಿ ಮಾಡುವ ಜನರಿಂದೋ ಅಥವಾ ಇಂಥವರ ಚಿತ್ರಗಳನ್ನು ಹೆಚ್ಚು ಜನ ನೋಡೋಲ್ಲ ಎಂತ ತಿಳಿದೋ ಅಂತೂ 'ಬರ' ಚಿತ್ರಕ್ಕೆ ಸೆನ್ಸಾರ್ ಮನ್ನಣೆ ಸಿಕ್ಕಿತು. ಆದರೆ ಚಿತ್ರ ಇನ್ನೂ ಹೊರಗೆ ಬಿಡುಗಡೆ ಆಗಿಲ್ಲ.

ಗುರು-ಶಿಷ್ಯರು ಈ ವರ್ಷದ ಭಾರೀ ಹಿಟ್. ಇದು ನೂರು ವಾರಗಳು ನಡೆಯಿತು. (ಬೇರೆ ಬೇರೆ ಚಿತ್ರಮಂದಿರಗಳಲ್ಲಿ. 'ಸಂಯುಕ್ತ' ಹಾಕಲಿಲ್ಲ ಅವರು) ಅಂತೂ ನಮ್ಮ ಪ್ರೇಕ್ಷಕ ಇದ್ದಲ್ಲೇ ಇದ್ದಾನೆ – ಬೆಳೆದಿಲ್ಲ – ಅನ್ನುವುದನ್ನು ಈ ರೀಮೇಕ್‌ನ ಹಾವಳಿ ಕಂಡು ಅರ್ಥಮಾಡಿಕೊಳ್ಳಬೇಕಾಗಿದೆ. ಅಥವಾ ಹೊಸತು ಅಂತ ಇವರು ಕೊಡುವುದೆಲ್ಲ ಹುಳಿತದ್ದೇ ಆಗಿದ್ದು ಹಳಸಲೇ ವಾಸಿ ಎನ್ನಿಸಿದ್ದರೂ ಇರಬಹುದು. ಅಂತೂ ಚಿತ್ರರಂಗ ಯಾವ ರಿಸ್ಕ್‌ಗೂ ಕೈಹಾಕದೆ ಗಲ್ಲಾಪೆಟ್ಟಿಗೆಗೆ ಮೋಸ ಆಗದಿದ್ರೆ ಸಾಕು ಅಂತ ವ್ಯವಹಾರ ಪ್ರವೃತ್ತವಾಯಿತು. ವ್ಯವಹಾರವಾದರೇನಂತೆ ಮಾರುಕಟ್ಟೆಯಲ್ಲಿ ಆರೋಗ್ಯಕರ ಪೈಪೋಟಿ ಬೇಕು. ನಾವು ಕೊಡುವ ಮಾಲಿಗೆ ಹೊಸ ಹೊಸ ಧ್ವನಿ – ರುಚಿ – ಸೇರಿಸಬೇಕು ಅಂತಲೂ ಯೋಚಿಸದೆ ಅದೇ ಅದೇ ತುಂಬಿಕೊಡುತ್ತ ಬ್ಯಾನರ್ ಟೈಟಲ್ ಲೇಬಲ್ ಮಾತ್ರ ಬೇರೆ ಅಂಟಿಸ್ತಿದಾರೆ. ಕನ್ನಡ ಚಿತ್ರ ಎಂದರೆ ವಾಕರಿಕೆ – ತಲೆನೋವು ತರಿಸುವಂಥ ಸ್ಥಿತಿಗೆ ಇಳಿಸಿರುವ ಈ 'ನಿಷ್ಠಾ'ವಂತರ ತಲೆಯಲ್ಲಿ ತುಂಬಿರುವುದಾದರೂ ಏನು ಅಂತ ಕೇಳಬೇಕಾಗಿದೆ.

ವಿಷ್ಣುವರ್ಧನ್ ಈ ವರ್ಷದ ಆರಂಭದಲ್ಲಿ ಅಭಿನಯದಲ್ಲಿ ಹೆಚ್ಚು ಸಾಧಿಸಿದರು. ವರ್ಷಾಂತ್ಯದ ವೇಳೆಗೆ ಮತ್ತೆ ಸೊರಗತೊಡಗಿದ್ದಾರೆ. ಬರೀ ಸುದ್ದಿಯಲ್ಲೇ ಇದ್ದಾರೆ. ಆದರೂ ಮನೆ ಮನೆಯ ಕತೆ, ಮತ್ತು ನಾಗ-ಕಾಳ-ಭೈರವದಲ್ಲಿ ತಂದೆಯ ಪಾತ್ರ ವಿಶೇಷವೆನಿಸಿತ್ತು. ಸರಿಯಾದ ಪಾತ್ರ ಸಿಕ್ಕರೆ (ಸೂತ್ರ ಬಿಟ್ಟು) ಎಷ್ಟು ಉತ್ತಮ ನಟನೂ ಆಗಬಲ್ಲರೆಂಬುದಕ್ಕೆ ಇವು ಉದಾಹರಣೆಗಳಾಗಬಹುದು.

ಅನುಪಮಾ – ಅದರ ನಿರೂಪಣೆಗಾಗಿ ಹೆಸರಾದ ಚಿತ್ರ. ಆದರೆ ಅನೇಕ ಕ್ಲೀಷೆಗಳಿದ್ದು, ಎಳೆತ ಅನ್ನಿಸಿಸೋತಿತು. ಆದರೆ ಈ ವರ್ಷ ಹಿಗ್ಗದೆ-ಕುಗ್ಗದೆ ಬಂದವರು ಅನಂತನಾಗ್. ಅಬ್ಬರವೂ ಇಲ್ಲ. ಇಳಿತವೂ ಅಲ್ಲ ಎನ್ನುವಂತೆ ಇವರು ಸಾಗಿದರು. ಈ ಮಧ್ಯೆ ಒಂದಿಷ್ಟು ಅವರ ಎಂದಿನ ಮಾತುಗಳ ಧಾಟಿಯಲ್ಲಿ ಜುಗುಪ್ಸೆಯಲ್ಲಿ ಕೆಲವು ಹೇಳಿಕೆಗಳನ್ನು ಕೊಟ್ಟರು. ತಮ್ಮ ನಿರ್ದೇಶದದಲ್ಲಿ ನಾಟಕ ಮಾಡಿ ಗೆದ್ದರು. ಅಂತೂ ಇನ್ನೂ ಜನಕ್ಕೆ ಹುಬ್ಬು ಮೇಲೇರಿಸಿ – ಆಸಕ್ತಿ ತೋರಿಸುವಷ್ಟು ಉಳಿದುಕೊಂಡಿರುವ ನಟ ಅನಂತನಾಗ್. 'ಬರ' ಚಿತ್ರವನ್ನು ಹಂಚಿಕೆ ಮಾಡುವ ಹೊಸ ಉದ್ದೇಶ ವ್ಯಕ್ತಪಡಿಸಿರುವ ಇವರು ಈ ಮೂಲಕ ತೀರಾ ನೇರವಾಗಿ ವಾಣಿಜ್ಯ ಪ್ರವೇಶಿಸುವ ಸೂಚನೆಗಳಿವೆ. ಇಲ್ಲಿಯ ಮಾತುಕತೆ ಕೇಳಿಬಂದ ಪ್ರಕಾರ ಅನಂತ್ ಎಂದಿನ ತನ್ನ ಅತಿ ಉದಾರತೆಯನ್ನು ತೋರುತ್ತಿರುವ ಹಾಗಿದೆ. ಪರಿಣಾಮ ಕಾದು ನೋಡಬೇಕು.

ಈ ವರ್ಷ ಕಂಡುಬಂದ ಎಲ್ಲ ಚಿತ್ರಗಳಲ್ಲೂ ಭೇಷ್ ಅನ್ನಿಸಿಕೊಂಡವರು ನಟ ಅಂಬರೀಷ್. ಅಲ್ಲಲ್ಲಿ ಎಂದಿನಂತೆ ಉಚ್ಚಾರಣೆ ದೋಷ ಇದ್ದರೂ ಭಾವಾಭಿನಯ – ಪರ್ಸನಾಲಿಟಿ ಎಲ್ಲ ದೃಷ್ಟಿಯಿಂದ ಅಂಬರೀಷ್ ಉತ್ತಮ ನಟರೆನ್ನಬಹುದಾಗಿದೆ. ಲಕ್ಷ್ಮಿಯಂಥ ಉತ್ತಮ ನಟಿ ಸಹ ಅಂಬರೀಷ್ ಎದುರು ಫೇಲ್ ಆಗತೊಡಗಿದ್ದಾರೆ. ಹಂತ ಹಂತವಾಗಿ ತನ್ನೊಳಗಿನ ಕಲಾವಿದನನ್ನು ಬೆಳೆಸುತ್ತ ಬಂದಿದ್ದಾರೆ ಅಂಬರೀಷ್. ಅವರಿಗೆ ರಾಜೇಂದ್ರಸಿಂಗ್ ಬಾಬು ಅವರಂಥ ಒಳ್ಳೆಯ ನಿರ್ದೇಶಕರ ನೆರವೂ ಇದೆ. ಹಾಗಲ್ಲದಾಗಲೂ ಅವರು ಕೆಡಿಸಿಲ್ಲ ಎನ್ನಲು ಅವಳ ಹೆಜ್ಜೆಯಂಥ ಚಿತ್ರದ ಪಾತ್ರಗಳೂ ಉದಾಹರಣೆಗಿವೆ.

ಜೈಜಗದೀಶ್ ಈ ವರ್ಷ ಸಾಕಷ್ಟು ಕೆಲಸ ಮಾಡಿ



ಸಂಗೀತಾ : ಜಯಮಾಲಾ, ಲೋಕೇಶ್

ದ್ದಾರೆ. ಅವರಿಗೆ ಇಂಥದೇ ಎಂಬ ಇಮೇಜ್ ಇನ್ನೂ ದಕ್ಕಿಲ್ಲವಾದಲೂ ಬೇರೆ ಬೇರೆ ಬಗೆಯ ಪಾತ್ರಗಳು ಸಿಕ್ಕಿವೆ. ಗಾಳಿಮಾತು, ಮುನಿಯನ ಮಾದರಿಯಲ್ಲಿ ವಿಶಿಷ್ಟವಾದ ಪಾತ್ರವೂ ದಕ್ಕಿದೆ.

ಕೋಕಿಲಾ ಮೋಹನ್ ಕನ್ನಡದಲ್ಲೂ ಕಂಡರು. ಸಿಕ್ಕ ಅವಕಾಶ ಸರಿಯಾಗಿ ಬಳಸಿಕೊಳಲಿಲ್ಲ ಅನ್ನಿಸಿದೆ. ಪ್ರತಿಭಾವಂತ ಹುಡುಗರು ಬೆಳವಣಿಗೆಯತ್ತ ಗಮನ ಹರಿಸದೆ ಅವಸರ ಪಡುತ್ತ – ಇದ್ದಲ್ಲೇ ಎಲ್ಲವೂ ಅಂದುಕೊಂಡರೆ ಹೀಗಾಗುತ್ತದೆ ಎನ್ನಿಸುತ್ತದೆ.

ಮುಸುರಿ ಕೃಷ್ಣಮೂರ್ತಿ ಹೆಚ್ಚು ಚಿತ್ರಗಳಲ್ಲಿ ಬಂದರು. ಅವರೇ ಚಿತ್ರ ನಿರ್ಮಿಸಿದರು. ಆದರೆ ಅವರ ಹಾಸ್ಯದ ಧಾಟಿ ಒಂದು ದರ್ಜೆಯ ಪ್ರೇಕ್ಷಕನನ್ನು ಮಾತ್ರ ತಲುಪುತ್ತದೆ – ಮತ್ತು ಅಭಿರುಚಿ ನಿರ್ಮಾಣದಲ್ಲಿ ಸೋಲುತ್ತಿದೆ ಅನ್ನಿಸಿತು. ಅವರಿಗಿರಬಹುದಾದ ಮಿತಿಗಳು ಅಥವಾ ಅದಕ್ಕಿಂತ ಮುಂದೆ ಹೋಗಲಾರದ ಯಾವ ಅನಿವಾರ್ಯಗಳೊ!

ಸುದರ್ಶನ್ - ಶೈಲಶ್ರೀ ಈಗ ಮತ್ತೆ ತೆರೆಗೆ ಬಂದರು. ರಾಜ್ ಅವರು ಸುದರ್ಶನ್‌ಗೆ ಅವಕಾಶ ಇತ್ತರು. ಶೈಲಶ್ರೀ ಎರಡು ಮೂರು ಚಿತ್ರಗಳಲ್ಲಿದ್ದಾರೆ. ಅದೂ ನಂಬರ್ ಐದೂ ಎಕ್ಕದಲ್ಲಿ ಆಕೆಗೆ ಹೆಚ್ಚು ಅವಕಾಶವಿದೆ. ನಾವು ಮರೆಯತೊಡಗಿದ್ದ ದಮಯಂತಿ(ಅನಿತಾ) – ಸುಧಾ ಸಿಂಧೂರ್ ತೆರೆಗೆ ಬಂದರು – ಇದ್ದುದರಲ್ಲೇ ಅಚ್ಚುಕಟ್ಟಾಗಿ ಅಭಿನಯಿಸಿದ್ದರು. ಹೊಸ ಹುಡುಗಿಯರೆಂದು ಬಂದ ಸುನೀತಾ ಗೀತಾ ವಿಜಯಗೀತಾ ಮೊದಲಾದವರನ್ನೂ ಮೀರಿಸುವ ಪ್ರತಿಭೆ ಇರುವ ಕನ್ನಡ ಹುಡುಗಿಯದು ಎಂತಲೂ ಸಿದ್ಧಮಾಡಿ ಕೊಟ್ಟರು. ರಾಜಕೀಯದಲ್ಲಿ ಅವಕಾಶಗಳಿಲ್ಲದೆ ಕರಟಿ ಹೋಗಿವೆ. ದಿನೇಶ್ ಕಂಡರು – ಬಹಳ ಯಶಸ್ವಿಯಾಗಿಲ್ಲ. ಚಿತ್ರರಂಗ ಈ ಜನಗಳನ್ನು ಸರಿಯಾಗಿ ಬಳಸಿಕೊಂಡಿಲ್ಲ. ಶ್ರೀನಿವಾಸಮೂರ್ತಿ ಕೂಡಿ ಬಾಳಿದರೆ..., ಕೆರಳಿದ ಸಿಂಹ ಹಾಗೂ ಪ್ರೀತಿಸಿ ನೋಡು ಚಿತ್ರಗಳಲ್ಲಿ ಪ್ರತಿಭೆ ಮಿಂಚಿಸಿದ್ದರು. ತನ್ನ ಪಾಲಿನದನ್ನು ಅಚ್ಚುಕಟ್ಟಾಗಿ ನಿರ್ವಹಿಸುವ ವಿನಯವಂತ ಹುಡುಗ. ಅವಕಾಶಗಳು ಹೆಚ್ಚು ಬೇಕು ಇಂತವರಿಗೆ.

ಧೀರೇಂದ್ರಗೋಪಾಲರ ಚಿತ್ರಗಳು ಬಂದಿವೆ. ತೀರಾ ಸದ್ದುಮಾಡಿ ಹೇಳುವಂಥ ಅಭಿನಯ ಕಾಣಲಿಲ್ಲ. ಇದ್ದುದರಲ್ಲಿ 'ನಾಗ-ಕಾಳ-ಭೈರವ'ದಲ್ಲಿ ಒಳ್ಳೇ ಪರ್‌ಫಾರ್ಮೆನ್ಸ್ ಇತ್ತು.

'ಭರ್ಜರಿ ಬೇಟೆ' ಚಿತ್ರ ವಿಶೇಷ ರೀತಿಯಲ್ಲಿ 'ಪ್ರತಿಭೆ'ಯನ್ನು ತೆರೆದಿಟ್ಟಿತ್ತು. ವಜ್ರಮುನಿ ಈ ಚಿತ್ರದ ಹೈಲೈಟ್ ಎನ್ನಬಹುದು. ಇರುವ ಮುದ್ರೆ ಅಳಿಸಿ – ಹೊಸತನ್ನ ತೊಡಿಸಿದ ನಿರ್ದೇಶಕರಿಗೆ ಕೊಂಚವೂ ಪಶ್ಚಾತ್ತಾಪ ಆಗದ ಹಾಗೆ ಅಭಿನಯಿಸಿಬಿಟ್ಟರು. 'ರಂಗನಾಯಕಿ'ಯ ಅಪರೂಪದ ಕೊಡುಗೆ ರಾಜಾನಂದ್ ಮತ್ತೆ ಮಿಂಚಿ 'ವಾಹ್' ಅನ್ನಿಸಿಕೊಂಡದ್ದೂ ಭರ್ಜರಿ ಬೇಟೆಯಲ್ಲೇ – ಅವರ ಅಭಿನಯದ ಗುರುಶಿಷ್ಯರು – ಮುನಿಯನ ಮಾದರಿ ಅಂಥ ವಿಶೇಷ ಆಗಲಿಲ್ಲ. ಒಳಗನ್ನ ಹೊರತರುವ ಛಾತಿವಂತ ನಿರ್ದೇಶಕರು ಬೇಕು ಇವರುಗಳು ಬಯಲಾಗಲು ಅನ್ನಿಸುತ್ತದೆ.

ಎಂ. ಪಿ. ಶಂಕರ್ ಅವರು ತಮ್ಮ ಚಿತ್ರ ಶ್ರೀಮಾನ್‌ನಲ್ಲಿ ಎಲ್ಲ ದೃಷ್ಟಿಯಲ್ಲೂ ಸೋತರೆನ್ನಬಹುದು. ಆದರೆ ಭರ್ಜರಿ ಬೇಟೆ ಇವರ ಪ್ರತಿಭೆಗೆ ಹೊಸದನ್ನು ತೋರಿಸಿತ್ತು.

ಅನೇಕ ಮಿತಿಗಳ ನಡುವೆಯೂ ರಾಜೇಂದ್ರಸಿಂಗ್ ಬಾಬು ಅವರೇ ಈ ವರ್ಷದ ವ್ಯಕ್ತಿ ಎನ್ನಬಹುದೇನೊ – ಅವರು ಈ ವರ್ಷ ಚಿತ್ರರಂಗಕ್ಕೆ ಕೊಟ್ಟಿರುವುದು ಬಹಳ. ಮತ್ತೆ ಮಾಧ್ಯಮದ ಬಗೆ – ಹೊಸತನದ ಬಗ್ಗೆ ಅವರಿಗಿರುವ ಕಾಳಜಿ ದೊಡ್ಡದು. ಪ್ರಭಾಕರ್ ಈ ವರ್ಷ ಬಹಳ ಸದ್ದು ಮಾಡಿದ್ದಾರೆ. ಒಂದೊಂದು ಚಿತ್ರದಲ್ಲೂ ಈತ ಬೆಳೆಯುತ್ತಿರುವುದರ ಸೂಚನೆಗಳು ಕಂಡಿವೆ. ಅದರಲ್ಲೂ ಈತನ 'ದೇವರ ಆಟ' ಚಿತ್ರದಲ್ಲಿಯ ಅಭಿನಯ ಗಮನಾರ್ಹವೆನಿಸಿತ್ತು. 'ಶಿಕಾರಿ'ಯಲ್ಲಿಯ ಪಾತ್ರ ಇಂಗ್ಲಿಷ್ ಸಿನಿಮಾಗಳ ಪಾತ್ರಗಳ ಅವತರಣಿಕೆ ಆದರೂ ಚಿತ್ರದ ಗತಿಯಿಂದಾಗಿ ಪಾತ್ರಕ್ಕೆ ಪೋಷಣೆ ದೊರಕಲಿಲ್ಲ.

ಈ ವರ್ಷ ಅವಕಾಶ ಇದ್ದೂ ಲೋಕೇಶ್ ಗಮನ ಸೆಳೆಯಲಿಲ್ಲ.

ಹಾಸ್ಯ ಪಾತ್ರಗಳಲ್ಲಿ ಉಮೇಶ್, ತ್ಯಾಗರಾಜ ಅರಸ್, ಜ್ಯೂನಿಯರ್ ನರಸಿಂಹರಾಜು ಗಮನ ಸೆಳೆದರು.

ಅಶೋಕ್ ಹೆಚ್ಚು ಕಂಡದ್ದು ನಿಜ – ಪ್ರತಿಭೆಯ ದೃಷ್ಟಿಯಿಂದ ವಿಶೇಷ ಅನ್ನಿಸಿಲ್ಲ.



"ಅಂತ" : ಮುಗಿಯದ ಗೊಂದಲ

ದ್ವಾರಕೀಶ್ ಯಶಸ್ವಿ ಹಾಗೂ ಹೆಚ್ಚು ಹೆಚ್ಚು ಚಿತ್ರ ನಿರ್ಮಾಣಗಳಲ್ಲಿ ಗಮನ ಹರಿಸಿದವರು. ಅವರು ವಿತರಣೆಗೆ ತೆಗೆದುಕೊಂಡ 'ಏಟು ಎದಿರೇಟು' ಬಿಟ್ಟರೆ ಉಳಿದಂತೆ ಆತ ಮುಟ್ಟಿದ್ದೆಲ್ಲ ಚಿನ್ನವೇ ಆಗಿದೆ.

ಗುರುಶಿಷ್ಯರು ನೂರು ದಿನ ಓಡಿದೆ.

ಶಿವರಾಂ, ಚೇತನ್ ರಾಮರಾವ್, ತೂಗುದೀಪ ಶ್ರೀನಿವಾಸ್ ಮೊದಲಾದವರು ಕೆಲಸ ಮಾಡಿದ್ದರೂ ಹೆಚ್ಚು ಸುದ್ದಿಯಾಗಲಿಲ್ಲ. ಚೇತನ್ ರಾಮರಾಯರು 'ಸ್ವಪ್ನ' ಚಿತ್ರದಲ್ಲಿ ಹೆಚ್ಚು ಅವಕಾಶ ಇದ್ದು ಅಭಿನಯಿಸಿದ್ದೊಂದೇ ವಿಶೇಷ. ದಾಸರಿ ನಾರಾಯಣರ ಆಲೋಚನೆಗಳು ಕನ್ನಡಕ್ಕೆ ಒಗ್ಗಿ ಬರಲಿಲ್ಲ – 'ಸ್ವಪ್ನ' ಸೋತಿತ್ತು.

ಸುಂದರಕೃಷ್ಣ ಅರಸ್ ಉತ್ತಮ ನಟನೆನ್ನುವದನ್ನು ಈ ವರ್ಷವೂ ಎತ್ತಿ ಹಿಡಿದಿದ್ದಾರೆ. ಆದರೂ ಅವರು ಅನೇಕ ಸಂದರ್ಭದಲ್ಲಿ ಮಾಧ್ಯಮವನ್ನು ನಿರ್ಲಕ್ಷಿಸುತ್ತಿದ್ದಾರೋಎಂಬ ಅನುಮಾನವೂ ಏಳದೇ ಇಲ್ಲ. ಅವರ ಮರೆಯದ ಹಾಡು ಚಿತ್ರದ ಅಭಿನಯ ಇತ್ಯಾದಿ ಗಮನಿಸಿದಾಗ ಏಟು ಎದಿರೇಟು, ಚದುರಿದ ಚಿತ್ರಗಳು, ಸಿಂಹದ ಮರಿಸೈನ್ಯ ಇಂಥಲ್ಲೆಲ್ಲ ಅಪರೂಪವೆನಿಸಿಕೊಂಡಿದ್ದಾರೆ. ಅನೇಕ ಕಡೆ ಅವಕಾಶಗಳೇ ಇಲ್ಲ. ಉದಾ: ಮಂಗಳ ಸೂತ್ರ ಇತ್ಯಾದಿ.

ಕೊಂಚಮಟ್ಟಿಗೆ ರಾಜ್ ಕಪೂರನನ್ನು ಅನುಕರಿಸ ಹೋಗಿ 'ಅಣ್ಣಮ್ಮ ದೇವಿ...ಮಹಾತ್ಮೆ'ಯಲ್ಲಿ ಎಡವಿದ್ದಾರೆ. ಅವರು ಅವರಾಗಿ ಅಭಿನಯಿಸಿದರೇ ಸೊಗಸೆಂದು ಪ್ರೇಕ್ಷಕ ಅವರಿಗೆ ಕಿವಿಮಾತು ಹೇಳಬೇಕು.

ಜಯಮಾಲಾ 'ಅಂತ' ಚಿತ್ರದ ನಂತರ ಬೇಗ ಸುದ್ದಿಯಾದರು – ಮಾರುಕಟ್ಟೆ ಬಂದಿದೆ. ತೆಲುಗಿನ ಚಿತ್ರವೊಂದಕ್ಕೆ ಹೋಗಿ ವಾಪಸ್ಸಾದರು. ಈ ಮಧ್ಯೆ ಅವರಿಗೆ ಅಂಬರೀಷರೊಡನೆ ಸ್ನೇಹವಾಗಿದೆ. ಸುದ್ದಿಗಳು ಬರುತ್ತಿವೆ. ಸತ್ಯ ಕಾಣೆವು. ಶುಭವಾಗಲಿ ಎನ್ನೋಣ.

ಆರತಿಯವರೂ ಈ ವರ್ಷ ಹೆಚ್ಚು ಚಿತ್ರಗಳಿಗೆ ಕೆಲಸ ಮಾಡಿದ್ದಾರೆ. ಅವರ ಆಯ್ಕೆಯಲ್ಲಿ ಜಾಣತನವಿಲ್ಲದೆ ಸ್ಟೇಲ್ ಆಗುತ್ತಲೂ ಇದ್ದಾರೆ. ಅಪರೂಪದ ಅಭಿನಯ ಅಂತ ಹೇಳುವಂಥ ಚಿತ್ರವನ್ನು ಹುಡುಕಬೇಕಾಗಿದೆ. ರಂಗನಾಯಕಿಯಲ್ಲಿ ಪ್ರತಿ ಫ್ರೇಮಿನಲ್ಲೂ ಶ್ರೀಮಂತವಾಗಿ ಕಂಡರಾದರೂ ಅಭಿನಯದಲ್ಲಿ ವೈವಿಧ್ಯ ತುಂಬಿಕೊಡಲಿಲ್ಲ ಆಕೆ. 'ಚದುರಿದ ಚಿತ್ರಗಳು' ಉತ್ತರಾರ್ಧ ಹಾಗೂ ಪ್ರೀತಿಸಿ ನೋಡು ಚಿತ್ರದಲ್ಲಿ ಕೆಲವು ದೃಶ್ಯಗಳಲ್ಲಿ ಆಕೆ ತಾನು ಉತ್ತಮ ಅಭಿನೇತ್ರಿ ಎಂಬುದನ್ನು ತೋರಿಸಿದ್ದಾರೆ.

ಆಕೆಯ ಅಭಿನಯದ ತಾಯಿಯ ಮಡಿಲಲ್ಲಿ ಚಿತ್ರ ಜನಪ್ರಿಯವಾಯಿತು. ಅದೂ ನೂರು ದಿನ ನಡೆಯಿತು. ಬಿಜಾಪುರದಂಥ ಜಾಗದಲ್ಲಿ ಹೆಚ್ಚು ವಾರಗಳು ಓಡುತ್ತಿದೆ. ರಾಜ್ ಅವರ ತಂಡದಲ್ಲಿ ಮತ್ತೆ ಮಂಜುಳಾ – ಆರತಿ ಸೇರಿದರು. ಈ ವರ್ಷ ಅತ್ಯಂತ ಹೆಚ್ಚು ವಿವಾದಕ್ಕೆ ಒಳಗಾದ ತಾರೆ ಆರತಿ. ಹೊಸ ಬಂಗಲೆ 'ಬೆಳ್ಳಿತೆರೆ' ಆಕೆಯ ಬದುಕಿನಲ್ಲಿ ಈ ವರ್ಷ ಹಿಗ್ಗಿನ ಮಜಲಿರಬಹುದು. ಕಣಗಾಲರು ಕೊರಗಿದರು – ಸೊರಗಿದರು – ಜಯನಗರದ ಪುಟ್ಟ ಮನೆಯೊಂದರಲ್ಲಿ ಆಫೀಸ್ ತೆರೆದರು ಕಂಡ ಮಕ್ಕಳು – ಕ್ಯಾಲೆಂಡರ್ – ಚಿತ್ರ ನೋಡಿದಾಗೆಲ್ಲ "ಆ ಮಗೂ ಯಶೂ ಇದ್ದಾ ಹಾಗಿದೆ" ಅನ್ನುತ್ತ ತಮ್ಮ ಆರತಿಯ ಪ್ರೀತಿಯ ಸಂಕೇತವನ್ನು ನೆನೆದು ಮರುಗಿದರು.

ಮಂಜುಳಾ ಎಂದಿನ ಜನಪ್ರಿಯತೆಯಲ್ಲೇ ಮುಂದುವರೆದಿದ್ದಾರೆ. ಮೈಯ ತೋರಕ್ಕೆ ಮಣಿದಿಲ್ಲ. ನನ್ನ ಸ್ಥಾನ ಇನ್ನಾರೂ ಆಕ್ರಮಿಸಲಾರರೆಂಬ ಹಮ್ಮು ಬಿಟ್ಟಿಲ್ಲ. ಚಾಣಾಕ್ಷೆ – ವ್ಯವಹಾರ ಚತುರೆ – ಜಾಗ ಭದ್ರ ಮಾಡಿಕೊಂಡಲ್ಲದೆ ವ್ಯವಹರಿಸರು. ತಾವೇ ಚಿತ್ರ ನಿರ್ಮಾಣಕ್ಕೆ ಕೈಹಾಕಿದ ಹಾಗಿದೆ. ಶ್ರೀನಾಥರೊಟ್ಟಿಗೆ ಶಿಕಾರಿ ಸಂದರ್ಭದಲ್ಲೂ ಕೊಂಚ ವಿರಸವಾಯಿತೆಂದು ಸುದ್ದಿ. ಹೇಳಿಕೆ – ಪ್ರತಿ ಹೇಳಿಕೆಗಳ ನಡುವೆ ಇದು ಸುಳ್ಳೆಂದು ಸಾಬೀತಾದ ಹಾಗಿದೆ! ರಾಜ್ ಅವರೊಟ್ಟಿಗೆ ಅಭಿನಯಿಸಿದರು – ನ್ಯಾಯದ ಮಾತಿಗೆ ಬಂದಾಗ ಯಾರಿಗೂ ಅಂಜದೆ ಗಟ್ಟಿ ಮಾತಾಡಿದರು. ಗೆದ್ದರು. ಮಂಜುಳಾಗೆ ಸನ್ಮಾನಗಳೂ ಆದವು ಈ ವರ್ಷ.

ಜಯಂತಿ ಅವರು ಹೆಚ್ಚು ಕಾಣಲಿಲ್ಲ. ಆದರೂ ನಾಗ-ಕಾಳ-ಭೈರವದಲ್ಲಿ ಆಕೆ ಉತ್ತಮವಾಗಿ ಅಭಿನಯಿಸಿದರು – ಲೀಡರ್ ವಿಶ್ವನಾಥ್‌ನಲ್ಲಿ ಸಹ.

ಶ್ರೇಷ್ಠ ನಟ ಪ್ರಶಸ್ತಿ ಬಂದರೂ ರಾಮಕೃಷ್ಣನಿಗೆ ಸಿಕ್ಕ ಅವಕಾಶಗಳು ಕಡಿಮೆಯೇ – 82 ಶುಭ ತಂದೀತು.

'ತೀರದ ಬಯಕೆ' ಅಂಥ ಕೆಟ್ಟ ಚಿತ್ರ ಬಂದರೂ ದಿ॥ ರಾಮಚಂದ್ರ ಶಾಸ್ತ್ರಿಗಳ ಕೊನೆಯ ಚಿತ್ರವಾಗಿ ಅದು ಗಮನಾರ್ಹವೆನ್ನಬಹುದು.

ಭಲಗಾರ ರಾಜು ನಿರ್ದೇಶಿಸಿದ್ದು. ವಿವಾದದಿಂದ ನಿಂತು ಈಗ ಬಿಡುಗಡೆ ಆದರೂ 2 ದಿನವೂ ನಡೆಯಲಿಲ್ಲ; ಆದರೆ ಈ ಚಿತ್ರಕ್ಕೆ ಪತ್ರಕರ್ತ ಶ್ಯಾಮಸುಂದರ ಕುಲಕರ್ಣಿ ಬರೆದ ಹಾಡುಗಳು ಜನಪ್ರಿಯವಾಗಿದ್ದವು – ಕುಲಕರ್ಣಿ ಈ ವರ್ಷ ಹಾಡುಗಳು ಬರೆಯುವಲ್ಲಿ ಬಿಸಿ ಆಗಿದ್ದರು. 'ಶಿಕಾರಿ' ಚಿತ್ರದಲ್ಲೂ ಅವರ ಹಾಡುಗಳಿದ್ದವು.

ಚಿ. ಉದಯಶಂಕರ್ ಅವರದೇ ಈ ಬಾರಿಯೂ ಸಾಹಿತ್ಯದಲ್ಲಿ ಮೇಲುಗೈ – ಉಳಿದಂತೆ ನರೇಂದ್ರಬಾಬು. ಕುಣಿಗಲ್ ನಾಗಭೂಷಣ ಹೆಚ್ಚು ಕೆಲಸಮಾಡಿದ್ದಾರೆನ್ನಬಹುದು.

ರಾಜನ್-ನಾಗೇಂದ್ರ, ವಿಜಯಭಾಸ್ಕರ್ ಒಳ್ಳೆಯ ಸಂಗೀತ ಕೊಟ್ಟಿದ್ದಾರೆ. ಜೇಸುದಾಸ್ ಸಹ ಸಹ ಅವರೇ ಹಾಡಿದ ಹಾಡುಗಳು ಮೆಲುಕು ಹಾಕುವಂತಿದ್ದವು. ಈ ವರ್ಷ ಅಶ್ವತ್ಥ್ ಉತ್ತಮ ಸಂಗೀತ ನೀಡಿದ್ದಾರೆ. 'ಆಲೆಮನೆ'ಯಲ್ಲಿ ದೊ.ರಂ.ಗೌ ಸಹ ಹಾಡುಗಳ ರಚನೆಯಲ್ಲಿ ಮುಂದಿದ್ದರು.

ಹಾಸ್ಯನಟ ಬಾಲಕೃಷ್ಣರ ಎಂದಿನ ಸ್ಟುಡಿಯೋ ಬಗೆಗಿನ ಅಪೀಲುಗಳಿಗೆ ಸರಕಾರ ಕಿವಿಗೊಡಲಿಲ್ಲ. ಆತ ಎಂದಿನಂತೆ ಕೆಲಸ ನಡೆಸಿದ್ದಾರೆ. ಸ್ಕೂಲಿಗೆ ದಾನ ಕೊಡ ಹೋಗಿ ಕೊಂಚ ವಿವಾದಕ್ಕೆ ಒಳಗಾದರು – ಇತರರ ಕಂಡು ಕಣ್ಣು ಕಿಸುರಾದಾಗ ಜನ ಸದ್ದು ಮಾಡುತ್ತಾರೆ.

ಮೂರು ದಾರಿಗಳು ಚಿತ್ರ ಹಲವು ಕಾರಣಗಳಿಗೆ ಸೋತಿತು. ಅಲ್ಲಿ ಬಂದ ಹೊಸ ಮುಖಗಳು ಎಂದಿನಂತೆ ಚಿತ್ರರಂಗಕ್ಕೆ ಸ್ಥಿರಪಡದವಾದ್ದರಿಂದ ಮರೆಯಾದವು. ಚಿತ್ರಕ್ಕೆ ಪ್ರಶಸ್ತಿ ಗಿಟ್ಟಿದ್ದೊಂದೇ ಲಾಭ. ದೊಡ್ಡ ಮಾತು, ದೇಶ, ಸಮಾಜ ಉದ್ಧಾರ ಅನ್ನುತಿದ್ದ ಚಿತ್ರದ ನಿರ್ಮಾಪಕರೇಕೋ ಈಗ ಸದ್ದಿಲ್ಲದವರಾಗಿಬಿಟ್ಟಿದ್ದಾರೆ.

ಗೃಹಣ ಈಗಾಗಲೇ ಎಲ್ಲ ಪ್ರಶಸ್ತಿ ಇತ್ಯಾದಿ ಸವಲತ್ತು ಪಡೆದಿದೆ. ಬಿಡುಗಡೆ ಈಗ. ವಂಶವೃಕ್ಷ – ಕಾಡು ಚಿತ್ರಗಳ ಮಿಶ್ರ ತಳಿ ಮಾತ್ರ. ಹೈಲೈಟ್ ಅಂದರೆ ಒಂದೆರಡು ಪಾತ್ರಗಳು ಹಾಗೂ ಛಾಯಾಗ್ರಹಣ.

ಹಾವಿನ ಹೆಡೆ ನೂರು ದಿನ ಓಡಿದೆ. ವಿಶೇಷವೆನಿಸಿದ್ದಿಲ್ಲ – ರಾಜ್ ಅವರ ಸಂಗೀತವೊಂದೇ ಈ ವರ್ಷದ ಹೈಲೈಟ್. ರಾಜ್ ಅವರ ಚಿತ್ರದಲ್ಲಿ ಹೊಸ ಗಾಯಕ ಪೂರ್ಣಚಂದ್ರ ಮತ್ತೆ ಪಿ.ಬಿ.ಎಸ್. ಹಾಡಿದ್ದು.

ಎಲ್ಲೆಲ್ಲೂ ಎಸ್.ಪಿ. ಅವರ ಧ್ವನಿಯೇ ಗುಡುಗಾಡುತ್ತಿದೆ. ಈ ಮಧ್ಯೆ ಆತನ ಬಗೆಗೂ ಕೆಲವಾರು ಮಾತಿದೆ. ಒಟ್ಟಾರೆ ಇನ್ನೊಂದು ಬದಲೀ ಇಲ್ಲದಾಗ ಅದಕ್ಕೆ ಜೋತು ಬೀಳುವುದಾಗಿದೆ.

'ಏಟು ಎದಿರೇಟು', 'ರಾಜೇಶ್ವರಿ' ವಿಭಿನ್ನ ಬಗೆಯ ಚಿತ್ರಗಳು – ಗಮನಾರ್ಹವಾದುವು. ತಾಂತ್ರಿಕವಾಗಿ 'ಏಟು ಎದಿರೇಟು' ಉತ್ತಮ. ಚಿತ್ರ.

'ಮಿಂಚಿನ ಬೆಳಕಲ್ಲಿ' 'ಆಲೆಮನೆ' ಕೊಂಚ ಪತ್ತೇದಾರಿ ಧಾಟಿಯವು. ಆಲೆಮನೆ ಛಾಯಾಗ್ರಹಣ ಕಥೆ ಹೇಳುವ ತಂತ್ರದಿಂದ ಯಶಸ್ವಿ ಆಯಿತು. 'ಅಪರಿಚಿತ' ಹ್ಯಾಂಗೋವರ್ ಅದಕ್ಕೆ ದುಡಿದ ತಂಡಕ್ಕಿನ್ನೂ ಮಾಸಿಲ್ಲ.

ಗಣೇಶ ಮಹಿಮೆ, ನಮ್ಮಮ್ಮ ತಾಯಿ ಅಣ್ಣಮ್ಮ ದೇವಿ. ಬಂಗಾರದ ಮನೆ ಚಿತ್ರಗಳು ವಿಚಿತ್ರ ನಂಬಿಕೆಗಳನ್ನು ಬಿಂಬಿಸುವಂಥವಾಗಿದ್ದವು. ಎಲ್ಲರಿಗೂ ಒಪ್ಪಿತವಾಗದವು. ಇತಿಹಾಸ ಎಂದುಕೊಂಡು ಬಂದ ಎಡೆಯೂರು ಸಹ ಒಗ್ಗಲಿಲ್ಲ – ಈ ಚಿತ್ರಕ್ಕೆ ಘಟನೆಗಳ ಬಿಗುವಿಲ್ಲ. ಪವಾಡಗಳಿಗೆ ಅರ್ಥವಿಲ್ಲವಾಗಿ ಸೋತಿತು. ಸಿರಿಯಾಳದ ಯಶಸ್ಸು ಇದಕ್ಕೂ ಎಂದು ನಂಬಿದ ನಿರ್ಮಾಪಕರಿಗೆ ನಿರಾಶೆಯಾಗಿರಬಹುದು. ಉತ್ತರ ಕರ್ನಾಟಕದಲ್ಲಿ ಚಿತ್ರ ಗೆಲ್ಲುವ ಸಾಧ್ಯತೆಗಳಿವೆ. ಚಿತ್ರಕ್ಕೆ ಕ್ಲೈಮ್ಯಾಕ್ಸೇ ಇಲ್ಲದ್ದು ಉತ್ಕಂಠತೆ ಮರೆಯಾಗಲು ಕಾರಣ.

ಪ್ರಕಾಶ್, ಗೌರಿಶಂಕರ್, ಶೇಖರ್, ಮಧು – ರಾಮಚಂದ್ರ ಈ ವರ್ಷದಲ್ಲಿ ಗಮನ ಸೆಳೆದ ಛಾಯಾಗ್ರಾಹಕರು. ತಮಿಳಿನಿಂದ ಬಂದ ರಾಮು ಸಹ ಒಳ್ಳೆಯ ಕೆಲಸ ಮಾಡಿ ತೋರಿಸಿದ್ದಾರೆ.

ಉಡುಪಿಯ ಜಯರಾಂ – ದೇವಿ, ಮೂಗೂರು ಸುಂದರ್ ನೃತ್ಯ ನಿರ್ದೇಶನದಲ್ಲಿ ಬಹಳ ಬಿಸಿ ಆಗಿದ್ದವರು.

ಶಿವಯ್ಯ, ವಿಜಯ್ ಸಾಹಸದಲ್ಲಿ ಮಿಗಿಲಾದ ಕೆಲಸ ಸಾಧಿಸಿದ್ದಾರೆ. ಪೇಕೇಟಿ ರಂಗ, ಕೇಶವರಾವ್ ಗಮನ ಸೆಳೆದರು ಸೆಟ್ ಡಿಸೈನಿಂಗ್‌ನಲ್ಲಿ –

ಮುಖ್ಯವಾಗಿ ಗುರುಶಿಷ್ಯರುಯಿಂದ ಕೆ. ವಿ. ಮಹಾದೇವನ್ ಕನ್ನಡದಲ್ಲೂ ಹೆಚ್ಚು ಹೆಸರಾದರು. ಜಯಗೋಪಾಲ್, ಹುಣಸೂರು – ಶಿವಶಂಕರ್ ಬರೆದ ಹಾಡುಗಳು ಕೆಲವು ಜನಪ್ರಿಯವಾಗಿದೆ. ಶಿವಶಂಕರ್ ಬರೆದ ರಾಜ್ಯೋತ್ಸವ ಗೀತೆಯೊಂದು ಉಪಯುಕ್ತವಾಗಿತ್ತು. ತಕ್ಷಣ ರೆಕಾರ್ಡ್ಸ್‌ಗೆ ಬರದ ಹಾಗೆ ಮಾಡುವ ಮೂಲಕ ಅದರ ಜನಪ್ರಿಯತೆ ತಗ್ಗಿಸಲು ಯತ್ನ ನಡೆದಿತ್ತೆನ್ನಲಾಗಿದೆ.

ಈ ಬಾರಿ ವಿತರಣಾ ಸಂಸ್ಥೆಗಳು ಹೆಚ್ಚು ಗದ್ದಲ ಮಾಡಲಿಲ್ಲ. ಎಲ್ಲ ಕಡೆ ಏನೊ ಸೊರಗಿದ ವಾತಾವರಣ ಕೆ. ಸಿ. ಎನ್. ಚಂದ್ರು, ಕೆ. ವಿ. ಗುಪ್ತ, ವಿಜಯಾ ಕಂಬೈನ್ಸ್. ಕೊಂಚ ಸುದ್ದಿಯಲ್ಲಿದ್ದರು. ವೇದಪ್ರದ ಹೊಸ ಸಂಸ್ಥೆ – ಕೊಂಚ ಸದ್ದು ಮಾಡುತ್ತಿದೆ. ಕೆಲವು ವಿತರಣಾ ಸಂಸ್ಥೆಗಳು ಮುಚ್ಚಿಹೋದ ಸುದ್ದಿಯೂ ಇದೆ.

ಹೊಸತನ - ವಿಶೇಷ ಅನ್ನಿಸುವಂಥ ತಾಂತ್ರಿಕ ತಜ್ಞರು ಕಾಣಲಿಲ್ಲ – ಕೆಡಿಸದೆ ಕೆಲಸ ಮಾಡಿದ್ದಾರೆ ಮಾತ್ರ. ರಾಜ್ ಅವರ ತಂಡ ಕರ್ನಾಟಕದಲ್ಲೇ ಕೆಲಸ ಮಾಡಿತು. ಅವರ ಚಿತ್ರಗಳಲ್ಲಿ ಕೆಲವು ವಸಂತ್ ಲ್ಯಾಬ್‌ನಲ್ಲಿ ಸಂಸ್ಕರಣಗೊಂಡವು. ವಸಂತ್ ಕೊಂಚ ಒಳ್ಳೆಯ ಕೆಲಸಗಾರ ಅನ್ನಿಸಿಕೊಂಡರು. ಹುಣಿಸೆ ಹೋದರೂ ಹುಳಿ ಹೋಗಿಲ್ಲ ಎಂಬುದನ್ನು ರಂಗಾ ಅವರು ಭಾಗ್ಯವಂತ ನಿರ್ದೇಶಿಸಿ ತೋರಿಸಿದರು.

ದೊರೆ-ಭಗವಾನ್ ಸಡಗರದಲ್ಲಿದ್ದಾರೆ. ಇದ್ದುದರಲ್ಲಿ ಉತ್ತಮವನ್ನು ಕೊಟ್ಟೆವೆಂಬ ಸಂತೃಪ್ತಿ ಅವರಿಗಿದೆ. ಭಾರ್ಗವ ರೀಮೇಕ್ ಮಾಡಿಯೂ ಗೆದ್ದರು. ಸ್ವತಂತ್ರ ಎಂದುಕೊಂಡ ಅವಳ ಹೆಜ್ಜೆ ಸಹ ರೀಮೇಕ್ ಎಂಬ ಸುದ್ದಿ ಇದೆ. ಭಾರ್ಗವ ಸದ್ದಿಲ್ಲದೆ ಅಬ್ಬರಕ್ಕಾಗಿ ತಿಳಿದ ಹಾಗೆ ಕೆಲಸ ಮಾಡುತ್ತಾರೆ.

ರೂಪಲೇಖಾ, ಚಿತ್ರಜ್ಯೋತಿ ಚಿತ್ರಪತ್ರಿಕೆಗಳು ಸಡಗರಿಸಿ ಹೊರ ಬಂದಿವೆ. ಸಂಸ್ಕೃತಿ ಇಲಾಖೆ ಸಂಬಂಧಪಟ್ಟ ಜನರನ್ನ ಆಕರ್ಷಿಸಿದೆ, ಆಹ್ವಾನಿಸದೆ ಚಿತ್ರರಂಗ ಕುರಿತು ವಿಚಾರಸಂಕಿರಣ ಮಾಡಿ ಖಾಲಿ ಕುರ್ಚಿ ಕಂಡು ಪೆಚ್ಚಾಗಿದೆ.

ಮೊದಲ ಬಾರಿಗೆ ಒಗ್ಗಟ್ಟಾದ ಚಿತ್ರ ವಲಯದ ಕಾರ್ಮಿಕರು (ಮುಖ್ಯವಾಗಿ ಪ್ರದರ್ಶನ ವಿಭಾಗ) ಸಂಪು ಹೂಡಿದರು. ಚಿತ್ರಮಂದಿರಗಳು ಮುಚ್ಚಲ್ಪಟ್ಟವು.

ಮಂತ್ರಿ ಮಹೋದಯರುಗಳೆಲ್ಲ ಯಾವುದಕ್ಕೆ ಇಲ್ಲ ಅಂದರೂ ಚಿತ್ರರಂಗದ ಮಂದಿ ಕರೆದರೆ 'ನ'ಕಾರ ಹೇಳದೆ ಶಿಸ್ತಾಗಿ ಹಾಜರಾಗುತ್ತಿದ್ದರು ಗಂಟೆಗಟ್ಟಲೆ ಭಾಷಣ ಬಿಗಿದು ಬೆನ್ನು ತಟ್ಟಿ ಮಾತಾಡಿ ಹಿರಿ ಹಿರಿ ಹಿಗ್ಗಿದ ಈ ಮಂದಿಗೆ ಅಷ್ಟೋ ಇಷ್ಟೋ ಅನುಕೂಲವನ್ನೂ ಮಾಡದೆ.

ಸಬ್ಸಿಡಿಯಂಥ ನೆರವನ್ನು ಒದಗಿಸಿದ್ದ ಹಿಂದಿನ ಹೆಗ್ಗಡೆಯವರಿಗಿಂತ ಅದೂ ಅಗ್ನಿ – ಇದೂ ಅಗ್ನಿ ಎಲ್ಲಾ ಕೊಡ್ತೀನಿ – ಬನ್ನಿ – ಕರೀರಿ – ಬರ್ತೀನಿ ಅನ್ನುತ್ತಲೇ ಇರುವ ಇಂದಿನ ರಾಜ್ಯಾಂಗವೇ ಚಿತ್ರದ ಮಂದಿಗೆ ಪ್ರಿಯವೂ – ಮೈಪುಳಕವನ್ನೂ ತರುವಂಥದ್ದಾಗಿದೆ.

ಮಂತ್ರಿಗಳು ಬರೆದ ಕತೆಗಳು ಚಿತ್ರ ನಿರ್ಮಾಣಕ್ಕೆ ಬರುತ್ತಿವೆ. ಮಂತ್ರಿಗಳನ್ನು ನಟಿಸಲೂ ಕೇಳಿ ಕರೆ ಕೊಡುತ್ತಿದ್ದಾರೆ. ಎಲ್ಲರೂ ಕೈಮುಸೆಯುತ್ತಾ ನಿಲ್ಲುತ್ತಿದ್ದಾರೆ. ಯಾರಿಗೆ ಯಾವ ಅಧ್ಯಕ್ಷ ಪದವಿ ಛೇರ್ಮನ್‌ಗಿರಿ ಕಾದಿದೆಯೋ – ಕೆಲಸವಿಲ್ಲದವರಿಗೆ ವಿಶ್ರಾಂತರು – ಅರ್ಧ



"ಬರ"ಕ್ಕೆ ಥಿಯೇಟರಿನ ಬರ.

# ನಾಳೆಗಾಗಿ ಬುನಾದಿಯಾದ ಎರಡು ವರ್ಷಗಳು

## ಕಳೆದ ಎರಡು ವರ್ಷಗಳಲ್ಲಿ, ಕ್ರಿಯಾಶೀಲ ನಾಯಕತ್ವದಲ್ಲಿ ಕರ್ನಾಟಕ ಸರಕಾರದ ಮುನ್ನಡೆ

ಶ್ರೀ ಆರ್. ಗುಂಡೂರಾವ್ ಅವರ ನೇತೃತ್ವದ ಸರ್ಕಾರ ಅಧಿಕಾರ ವಹಿಸಿಕೊಂಡು ಎರಡು ವರ್ಷಗಳು ಸಂದವು. ಈ ಅವಧಿಯಲ್ಲಿ ಕೈಕೊಂಡ ಜನಹಿತ ಕಾರ್ಯಗಳನ್ನು ಹೆಮ್ಮೆಯಿಂದ ಸ್ಮರಿಸಬಹುದಾಗಿದೆ.

ಹೊಸ ಸರ್ಕಾರ ಆಡಳಿತ ವಹಿಸಿಕೊಂಡ ದಿನವೇ ಪ್ರಾಶಸ್ತ್ಯಗಳನ್ನು ಗುರುತಿಸಿತು. ಮೊದಲನೆಯದಾಗಿ ಆಡಳಿತ ಕ್ರಮಗಳನ್ನು ಸುಗಮಗೊಳಿಸುವುದು. ಫಲಸ್ವರೂಪ ಜಿಲ್ಲಾ ಮತ್ತು ವಿಭಾಗೀಯ ಕೇಂದ್ರಗಳಲ್ಲಿ ಮಂತ್ರಿಮಂಡಲದ ಸಭೆಗಳನ್ನು ನಡೆಸಲಾಗುತ್ತಿದೆ.

ಜನತೆಯ ಮನೆಯ ಬಾಗಿಲಿಗೇ ಸರ್ಕಾರ ನಡೆದು ಬಂದಾಗ ಜನತೆಯೊಡನೆ ನೇರ ಸಂಪರ್ಕ ಸ್ಥಳೀಯ ಸಮಸ್ಯೆಗಳ ಪ್ರತ್ಯಕ್ಷ ಅನುಭವ, ಪರಿಶೀಲನೆ, ಪರಿಹಾರ, ಬೆಳಗಾಂವ, ಗುಲ್ಬರ್ಗ ಮತ್ತು ಮೈಸೂರುಗಳಲ್ಲಿ ಸಭೆ ನಡೆಸಿ, ಆ ವಿಭಾಗಗಳಲ್ಲಿಯ ಅಭಿವೃದ್ಧಿ ಕಾರ್ಯಗಳಿಗಾಗಿ ಹಣದ ಮತ್ತು ಇತರ ಅಡಚಣೆಗಳ ನಿವಾರಣೆ, ಪ್ರಗತಿಪಥ ಚಲನೆಗೆ ನವಚೇತನ.

ಭೂ ಸುಧಾರಣೆ ಕಾಯ್ದೆ ಜಾರಿಗೆ ಬಂದು ಎರಡು ದಶಕಗಳಾದರೂ ಕಳೆದೆರಡು ವರ್ಷಗಳ ಸಾಧನೆ ಅವಿಸ್ಮರಣೀಯ. ಈಗಾಗಲೇ ಶೇಕಡಾ 95ರಷ್ಟು ಗೇಣಿದಾರರ ಅರ್ಜಿಗಳು ವಿಲೇವಾರಿಯಾಗಿದ್ದು ಸುಮಾರು 5 ಲಕ್ಷ ಗೇಣಿದಾರರು ಭೂ ಒಡೆತನ ಪಡೆದಿದ್ದಾರೆ. ಸುಮಾರು ಒಂದು ಲಕ್ಷ ಭೂ ರಹಿತ ಬಡವರಿಗೆ ಭೂಮಿ ಹಂಚಲಾಗಿದೆ. ಇದರಲ್ಲಿ ಶೇಕಡಾ 50ರಷ್ಟು ಜನರು ಹರಿಜನರು.

ಹಾರಂಗಿ, ಹೇಮಾವತಿ, ಹಾಗೂ ಮಲಪ್ರಭಾಗಳಿಂದ ನೀರು ಬಿಡುಗಡೆ. ಹೆಚ್ಚುವರಿ ಭೂಮಿಗೆ ನೀರಿನ ಪೂರೈಕೆ, ಹಸಿರು ಕ್ರಾಂತಿಗೆ ಮತ್ತಷ್ಟು ಬಲ.

ಹಿಂದುಳಿದ ಪ್ರದೇಶ ಗುಲ್ಬರ್ಗಾ ವಿಭಾಗದ ಅಭಿವೃದ್ಧಿಗಾಗಿ ಪ್ರತ್ಯೇಕ ಗುಲ್ಬರ್ಗಾ ಪ್ರದೇಶ ಅಭಿವೃದ್ಧಿ ಕಾರ್ಪೊರೇಷನ್ ಸ್ಥಾಪನೆ. ಗುಲ್ಬರ್ಗಾ ನಗರಸಭೆಯನ್ನು ಕಾರ್ಪೊರೇಷನ್ ಆಗಿ ಪರಿವರ್ತಿಸಲಾಯಿತು.

ವಿಶ್ವ ಕನ್ನಡ ಸಮ್ಮೇಳನಕ್ಕಾಗಿ ಭರದಿಂದ ಸಿದ್ಧತೆ ನಡೆಯುತ್ತಿದ್ದು, ಜಿಲ್ಲಾ ಕೇಂದ್ರಗಳಲ್ಲಿ ಸಾಹಿತ್ಯ ಭವನ ನಿರ್ಮಿಸಲು ನಿರ್ಧರಿಸಲಾಗಿದೆ. ಪತ್ರಿಕೋದ್ಯಮದ ಬೆಳವಣಿಗೆಗಾಗಿ ಪತ್ರಿಕಾ ಅಕಾಡೆಮಿಯನ್ನು ಸ್ಥಾಪಿಸಲಾಗಿದೆ.

ರಾಜ್ಯೋತ್ಸವ ಬೆಳ್ಳಿಹಬ್ಬದ ಈ ವರ್ಷ ಮುನ್ನೂರಕ್ಕೂ ಹೆಚ್ಚು ಜನಸಂಖ್ಯೆ ಇರುವ ಶಾಲೆಗಳಿಲ್ಲದ ಎಲ್ಲ ಹಳ್ಳಿಗಳಿಗೂ ಪ್ರಾಥಮಿಕ ಶಾಲೆಗಳನ್ನು ಮತ್ತು ಕೊಠಡಿಗಳನ್ನು ಒದಗಿಸಬೇಕೆಂಬುದು ಸರ್ಕಾರದ ನಿಲುವು. ಇದರಂತೆ **649** ಹಳ್ಳಿಗಳಲ್ಲಿ ಶಾಲೆಗಳನ್ನು ತೆರೆಯಲು ಮತ್ತು **1,416** ಹಳ್ಳಿಗಳಲ್ಲಿ ಶಾಲಾ ಕೊಠಡಿಗಳನ್ನು ನಿರ್ಮಿಸಲು ಕ್ರಮ ಕೈಗೊಳ್ಳಲಾಗಿದೆ.

ಪ್ರಸ್ತುತ ಸರ್ಕಾರ ಗ್ರಾಮೀಣ ವಸತಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿದೆ. **1973–74**ರಿಂದ **1979**ರ ಅಂತ್ಯದ ವೇಳೆಗೆ **1.36** ಲಕ್ಷ ಮನೆಗಳನ್ನು ಕಟ್ಟಿ ಪೂರ್ಣಗೊಳಿಸಿದರೆ, ಜನವರಿ **1980**ರಿಂದ ಇಲ್ಲಿಯವರೆಗೆ **1.33** ಲಕ್ಷ ಮನೆಗಳನ್ನು ಕಟ್ಟಿ ಮುಗಿಸಲಾಗಿದೆ. ಒಟ್ಟು ಕಟ್ಟಲಾದ ಮನೆಗಳ ಪೈಕಿ **1.20** ಲಕ್ಷ ಮನೆಗಳು ಹರಿಜನರಿಗೆ ಸೇರಿವೆ. ಮತ್ತೆ **6,000** ಮನೆಗಳ ನಿರ್ಮಾಣಕ್ಕೆ ಮಂಜೂರಾತಿ ನೀಡಲಾಗಿದ್ದು **3** ಕೋಟಿ ರೂ. ಗಳನ್ನು ಬಿಡುಗಡೆ ಮಾಡಲಾಗಿದೆ.

ಹರಿಜನರ ಸಮಗ್ರ ಅಭಿವೃದ್ಧಿಗಾಗಿ ಕರ್ನಾಟಕದಲ್ಲಿ ವಿಶೇಷ ಯೋಜನೆಯೊಂದನ್ನು ಕೈಗೊಳ್ಳಲಾಗಿದೆ. ಈ ವರ್ಷ ಈ ಯೋಜನೆಯ ಅಂತರ್ಗತ ಅಭಿವೃದ್ಧಿ ಕಾರ್ಯಗಳಿಗಾಗಿ **135.66** ಕೋಟಿ ರೂ.ಗಳನ್ನು ಒದಗಿಸಲಾಗಿದೆ.

ಕರ್ನಾಟಕದಲ್ಲಿ ಕಂಡುಬಂದಿರುವ ನವಚೇತನವೇ ಸರ್ಕಾರದ ಸಾಧನೆಗೆ ಸಾಕ್ಷಿ. ಅತ್ಯುತ್ತಮ ಯೋಜನೆ ವಿಧಾನವೆಂದರೆ, ಈ ವರೆಗಿನ ಸಾಧನೆಗಳ ಸಿಂಹಾವಲೋಕನ, ಅವುಗಳ ಮೌಲ್ಯಮಾಪನ ಹಾಗೂ ಅವುಗಳ ಮಾರ್ಗದರ್ಶನದಿಂದ ಹೊಸ ದಿಕ್ಕಿನಲ್ಲಿ ಹೊಸ ಭರವಸೆಯೊಂದಿಗೆ ಮುನ್ನಡೆಯುವುದು.



ಪ್ರಕಟಣೆ: ಕರ್ನಾಟಕ ಸರಕಾರದ
ವಾರ್ತಾ ಮತ್ತು ಪ್ರಚಾರ ಇಲಾಖೆ

ಡಿಐಪಿ/ಸಿಆರ್‌ಪಿ/1060/81–82

ವಿಶ್ರಾಂತರು ಆದವರಿಗೆ ಖುರ್ಚಿ ಕೊಟ್ಟ ಪುಣ್ಯ ಮುಖ್ಯ ಮಂತ್ರಿಗಳಿಗಿದೆ.

ಹೊರಗಡೆಯೂ ಬಿಡುಗಡೆ ಮಾಡಿ – ಬೆಂಗಳೂರಿಗೂ ತಂದ ಚಿತ್ರ ರೈತನ ರಕ್ತ– ಅದು ವಿನಾ ಉಳಿದಂತೆ ಕಳಪೆ.

ಒಟ್ಟು 65 ಚಿತ್ರಗಳು ಎಂದರೂ ಎರಡು ಚಿತ್ರಗಳು ರಾಜಧಾನಿಗೆ ಬರದೆ ಹೊರಗೇ ಬಿಡುಗಡೆಯಾದ ಸುದ್ದಿ ಇದೆ. ಅವು ರಾಜಧಾನಿಗೆ ತಿಳಿಯದ್ದು – ಕಾಣದ್ದು. ಆದರೂ ಕರ್ನಾಟಕದಲ್ಲೇ ಬಿಡುಗಡೆ ಆದ ಕನ್ನಡ(!) ಚಿತ್ರಗಳಾದ್ದರಿಂದ ಸದ್ಯ ಅರುವತ್ತಾರು ಎಂದೇ ಹೇಳ ಬೇಕಾಗುತ್ತದೆ.

ಕ್ರಿಯಾಶೀಲತೆ –, ಉತ್ಸಾಹ – ಸಡಗರ – ಹೊಸತನ ಎಲ್ಲ ಕಳೆದುಕೊಂಡು ಕೇವಲ ಸಂಖ್ಯೆಯಿಂದ ಮಾತ್ರ ಏರಿರುವ ನಮಗೆ ಕೊನೆಯದಾಗಿ ನಮ್ಮಲ್ಲೂ ಇದ್ದ



ಅಭಿನೇತ್ರಿ 'ಸಾವಿತ್ರಿ'ಯವರ ನಿಧನದ ವಾರ್ತೆಯೂ ಬಂದು ಸೇರಿದೆ. ವರ್ಷದ ಕೊನೆಯ ಚಿತ್ರವಾಗಿ ಗೀತ ಪ್ರಿಯರ ನಿರ್ದೇಶನದಲ್ಲಿ ಬಂದ ಚಿತ್ರ ಪ್ರೀತಿಸಿ ನೋಡು – ಅತ್ಯಂತ ನಿರಾಶೆ ತಂದಿದೆ. ಗೀತಪ್ರಿಯ ಹೆಚ್ಚಿನ ಚಿತ್ರ ಕೊಟ್ಟರು – ಫಲಿತಾಂಶ ಒಳ್ಳೆಯದಿಲ್ಲ. ಇವರ ಶೋಧದ 'ನಾಯಕಿ'ಯರೂ ಕಳಪೆಯೇ – ಚಿತ್ರರಂಗದ ಸ್ಥಿತಿ ಅಂಗ ವಿಕಲರ ವರ್ಷದಲ್ಲಿ ಅದೇ ಮಾರ್ಗವನ್ನು ಅನುಸರಿಸಿ ಸೊರಗಿ ನಿಂತಿತ್ತು – ಸ್ವಾವಲಂಬನೆಗೆ ಪ್ರಯತ್ನಿಸಲೂ ಇಲ್ಲ.

ಅತ್ಯಂತ ಬೇಸರದ – ದುರಂತದ ವರ್ಷ 1981. 82 ರಲ್ಲಿ ಒಳ್ಳೆಯ ಮಾತನ್ನು ಬರೆಯುವ ಅವಕಾಶ ಈ ಲೇಖನಿಗೆ ದಕ್ಕಿದರೆ...!

ಶಕ್ತಿಪ್ರಸಾದ ಇದ್ದುದರಲ್ಲಿ ಉತ್ತಮ ಕೆಲಸ ಮಾಡಿ

# 1981ರಲ್ಲಿ ಬಿಡುಗಡೆಯಾದ

| ಕ್ರ.ಸಂ. | ಬಿಡುಗಡೆ ದಿನಾಂಕ | ಚಿತ್ರದ ಹೆಸರು | ನಿರ್ದೇಶಕರು | ನಟ-ನಟಿಯರು | |
|---|---|---|---|---|---|
| 1. | 2-1-1981 | ಶ್ರೀ ರಾಘವೇಂದ್ರ ವೈಭವ | ಬಾಬು ಕೃಷ್ಣಮೂರ್ತಿ | ಶ್ರೀನಾಥ್, ಚಂದ್ರಕಲಾ, ಉದಯಕುಮಾರ್, ಹೇಮಾಚೌಧರಿ | ವರ್ಣ |
| 2. | 9-1-1981 | ಕುರುಬರ ಲಕ್ಕ | ಎಚ್. ಎಂ. ಕೃಷ್ಣಮೂರ್ತಿ | ರಾಜೇಂದ್ರ ಬಾಬು, ಮಮತಾ ಶೆಣೈ, ವೇಣುಗೋಪಾಲ್ | ಕಪ್ಪು-ಬಿಳುಪು |
| 3. | 16-1-1981 | ಲೀಡರ್ ವಿಶ್ವನಾಥ್ | ಮಣಿಮುರುಗನ್ | ಅಂಬರೀಷ್, ಜಯಂತಿ, ಸುಂದರಕೃಷ್ಣ ಅರಸ್ | ವರ್ಣ |
| 4. | 23-1-1981 | ಮನೆ-ಮನೆ-ಕಥೆ | ರಾಜಾಚಂದ್ರ | ವಿಷ್ಣುವರ್ಧನ್, ಜಯಚಿತ್ರ, ಶ್ರೀನಿವಾಸಮೂರ್ತಿ | ,, |
| 5. | 30-1-1981 | ಕರಿನಾಗ | ಬಸವರಾಜ ಕೆಸ್ತೂರ್ | ಶಂಕರನಾಗ್, ವೆಣ್ಣರಾಡೈ ನಿರ್ಮಲಾ, ಸುಂದರಕೃಷ್ಣಅರಸ್ | ,, |
| 6. | 6-2-1981 | ರಂಗನಾಯಕಿ (ಸಿನಿಮಾಸ್ಕೋಪ್) | ಪುಟ್ಟಣ್ಣ ಕಣಗಾಲ್ | ಆರತಿ, ಅಶೋಕ್, ರಾಜಾನಂದ್, ರಾಮಕೃಷ್ಣ, ಅಂಬರೀಷ್ | ,, |
| 7. | 6-2-1981 | ಚಂಚಲ | ಮೈಸೂರು ಗಿರೀಶ್ | ಬಿ. ವಿ. ರಾಧಾ | ಕಪ್ಪು-ಬಿಳುಪು |
| 8. | 13-2-1981 | ತೀರದ ಬಯಕೆ | ರಾಜು | ವಿಜಯಕಲಾ, ರಾಂ ಗೋಪಾಲ್, ಬಾಲಕೃಷ್ಣ | ,, |
| 9. | 20-2-1981 | ತಾಯಿಯ ಮಡಿಲಲ್ಲಿ | ಬಿ. ಸುಬ್ಬರಾವ್ | ಆರತಿ, ಅಶೋಕ್, ಉದಯಕುಮಾರ್, ಬಾಲಕೃಷ್ಣ | ,, |
| 10. | 27-2-1981 | ಕುಲಪುತ್ರ | ಟಿ. ಆರ್. ರಾಮಣ್ಣ | ಶಂಕರನಾಗ್, ಗಾಯತ್ರಿ, ದ್ವಾರಕೀಶ್ | ,, |
| 11. | 27-2-1981 | ಛಲಗಾರ | ಸಿ. ಎನ್. ಕೃಷ್ಣ | ರಾಜಗೋಪಾಲ್, ಹೇಮಲತಾ, ಬಾಲಕೃಷ್ಣ | ,, |
| 12. | 6-3-1981 | ಗ್ರಹಣ | ಟಿ. ಎಸ್. ನಾಗಾಭರಣ | ಆನಂದ, ಎಸ್. ಎನ್. ರೊಟ್ಟಿ, ಸತ್ಯ, ಮಾಲತಿ | ,, |
| 13. | 6-3-1981 | ಮೂರು ದಾರಿಗಳು | ಗಿರೀಶ್ ಕಾಸರವಳ್ಳಿ | ಶ್ರೀರಂಗ, ಸುಜಾತ, ಕೃಷ್ಣಸ್ವಾಮಿ, ಧನಂಜಯ, ಸರೋಜಮ್ಮ | ,, |
| 14. | 12-3-1981 | ಹಾವಿನ ಹೆಡೆ | ವಿ. ಸೋಮಶೇಖರ್ | ಡಾ। ರಾಜಕುಮಾರ್, ಸುಲಕ್ಷಣ, ತೂಗುದೀಪ ಶ್ರೀನಿವಾಸ | ವರ್ಣ |
| 15. | 27-3-1981 | ಏಟು-ಎದಿರೇಟು | ಮಣಿಮುರುಗನ್ | ಶ್ರೀನಾಥ್, ಲಕ್ಷ್ಮಿ, ಸುಂದರಕೃಷ್ಣ ಅರಸ್, ರಾಮಕೃಷ್ಣ | ,, |
| 16. | 3-4-1981 | ಅನುಪಮಾ | ಎಚ್. ರೇಣುಕಾ ಶರ್ಮ | ಅನಂತ್‌ನಾಗ್, ಮಾಧವಿ, ಬಾಲಕೃಷ್ಣ, ಸುಧಾ ಸಿಂದೂರ್ | ,, |
| 17. | 10-4-1981 | ಅಂತ | ಎಸ್.ವಿ. ರಾಜೇಂದ್ರಸಿಂಗ್(ಬಾಬು) | ಅಂಬರೀಷ್, ಲಕ್ಷ್ಮಿ, ಜಯಮಾಲಾ, ಪ್ರಭಾಕರ್ | ,, |
| 18. | 17-4-1981 | ಗಾಳಿಮಾತು | ದೊರೆ-ಭಗವಾನ್ | ಲಕ್ಷ್ಮಿ, ಜೈಜಗದೀಶ್, ಅಶ್ವತ್ಥ್, ಕೋಕಿಲಾ ಮೋಹನ್ | ,, |
| 19. | 1-5-1981 | ಪ್ರಚಂಡ ಪುಟಾಣಿಗಳು | ಗೀತಪ್ರಿಯ | ಭಾನುಪ್ರಕಾಶ್, ಇಂದಿರಾ, ಮಾ। ರಾಮಕೃಷ್ಣ ಹೆಗ್ಗಡೆ | ,, |
| 20. | 1-5-1981 | ನಾರಿ ಸ್ವರ್ಗಕ್ಕೆ ದಾರಿ | ಸಿದ್ದಲಿಂಗಯ್ಯ | ಲೋಕೇಶ್, ಆರತಿ, ಶ್ರೀನಿವಾಸಮೂರ್ತಿ, ದಿನೇಶ್ | ,, |
| 21. | 1-5-1981 | ಪ್ರಿಯತಮ | ಎಚ್. ಪಿ. ಜಯಪ್ರಕಾಶ್ | ವಿಜಯಕಲಾ, ಜನಾರ್ದನ್, ಮಾಲತಿ ರಾವ್ | ಕಪ್ಪು-ಬಿಳುಪು |
| 22. | 7-5-1981 | ನಾಗ-ಕಾಳ-ಭೈರವ | ತಿಪಟೂರು ರಘು | ವಿಷ್ಣುವರ್ಧನ್, ಜಯಮಾಲಾ, ಜಯಂತಿ, ಚಂದ್ರಶೇಖರ್ | ವರ್ಣ |
| 23. | 8-5-1981 | ಹಣಬಲವೋ-ಜನಬಲವೋ | ವಿಜಯ್ | ಶಂಕರ್‌ನಾಗ್, ಮಾಧವಿ, ಎಂ. ಪಿ. ಶಂಕರ್, ಲೀಲಾವತಿ | ,, |
| 24. | 22-5-1981 | ಗೀತಾ | ಶಂಕರ್‌ನಾಗ್ | ಶಂಕರ್‌ನಾಗ್, ಅಕ್ಷತಾರಾವ್, ಗಾಯತ್ರಿ, ಶಿವರಾಂ | ,, |
| 25. | 29-5-1981 | ಕೂಡಿ ಬಾಳಿದರೆ ಸ್ವರ್ಗಸುಖ | ಸಿದ್ದಲಿಂಗಯ್ಯ | ಶ್ರೀನಿವಾಸಮೂರ್ತಿ, ರಾಜ್ಯಲಕ್ಷ್ಮಿ, ಎಸ್. ಎಸ್. ರಾವ್ | ,, |
| 26. | 5-6-1981 | ಸಂಗೀತಾ | ಡಾ। ಚಂದ್ರಶೇಖರ ಕಂಬಾರ | ಲೋಕೇಶ್, ಜಯಮಾಲಾ, ಮಾನು, ಉಮಾ ಶಿವಕುಮಾರ್ | ,, |
| 27. | 12-6-1981 | ನೀ ನನ್ನ ಗೆಲ್ಲಲಾರೆ | ವಿಜಯ್ | ಡಾ। ರಾಜಕುಮಾರ್, ಮಂಜುಳಾ, ಅಶ್ವತ್ಥ್, ಸುದರ್ಶನ್ | ,, |
| 28. | 19-6-1981 | ಬಾಳು ಬಂಗಾರ | ಗೀತಪ್ರಿಯ | ಅಶೋಕ್, ಪಲ್ಲವಿ, ಮಾನು, ಶ್ರೀಲಲಿತಾ, ಮಾನು | ,, |
| 29. | 26-6-1981 | ಯಾವ ಹೂವು ಯಾರ ಮುಡಿಗೊ | ಬಾಬು ವೆಂಕಟ ರಾವ್ | ಲೋಕೇಶ್, ಪ್ರಿಯಂವದನ, ಲೋಕನಾಥ್, ರಾಮಕೃಷ್ಣ | ,, |
| 30. | 3-7-1981 | ಅವಳಿ-ಜವಳಿ | ಎ. ವಿ. ಶೇಷಗಿರಿರಾವ್ | ಶ್ರೀನಾಥ್, ಮಂಜುಳಾ, ಲೋಕೇಶ್, ಹೇಮಾ ಚೌಧರಿ | ,, |
| 31. | 3-7-1981 | ಪ್ರೇಮಾನುಬಂಧ | ಆರ್. ರಾಮಮೂರ್ತಿ | ಶ್ರೀನಾಥ್, ಮಂಜುಳಾ, ರಾಜೇಶ್, ಕೆ. ವಿಜಯಾ | ,, |
| 32. | 10-7-1981 | ಸ್ವಪ್ನಾ | ದಾಸರಿ ನಾರಾಯಣ ರಾವ್ | ರಾಮ್‌ಜಿ, ಸ್ವಪ್ನಾ, ರೀನಾ, ಚೇತನ್ ರಾಮರಾವ್ | ,, |
| 33. | 10-7-1981 | ರೈತನ ಮಕ್ಕಳು | ಚಿಂದೋಡಿ ಬಂಗಾರೇಶ್ | ಜಯಂತಿ, ಬಸವ ರಾಜ್, ಚಿಂದೋಡಿ ಲೀಲಾ | ,, |

ದ್ದಾರೆ. ಇಳಯರಾಜಾ ಕನ್ನಡಕ್ಕೆ ಸಂಗೀತ ಕೊಟ್ಟರು.

ಜಿ. ಕೆ. ವೆಂಕಟೇಶ್ ಮತ್ತೊಮ್ಮೆ ಒಳ್ಳೆಯ ಸಂಗೀತ ನಿರ್ದೇಶಕನೆಂಬುದನ್ನು ಸ್ಪಷ್ಟಮಾಡಿದ್ದಾರೆ.

'ಸಂಗೀತ' ಚಿತ್ರ ಪ್ರಶಸ್ತಿ ಗಿಟ್ಟಿಸಿತು. ಕಂಬಾರರ ಜಾನಪದ ಸೊಗಡು ನಗರದ ಶಿಸ್ತಿನ ಜನಕ್ಕೆ ಪ್ರಿಯವಾಯಿತು. ಸಂಸ್ಕೃತಿ ಇಲಾಖೆಯ ನಿರ್ದೇಶಕ ವಿಜಯ ಸಾಸನೂರರೂ ಈ ಚಿತ್ರದಲ್ಲಿ ಹಾಡಿದ್ದರು. ಅವರ ಕಾದಂಬರಿ ಆಧಾರಿತ 'ಮಹಾ ಪ್ರಚಂಡರು' ಚಿತ್ರವಾಯಿತು. ಘರ್ಜನೆ–ಸಪ್ನಾ ಮೊದಲಾದ ಚಿತ್ರಗಳು ಅಬ್ಬರದ ಪ್ರಚಾರ ಪಡೆದು ಬಂದವು. ಗೆಲ್ಲಲಿಲ್ಲ. ಮಣಿ ಮುರುಗನ್ ಕೆಲಸ ಗಮನಾರ್ಹವೆನ್ನಿಸಿದೆ ಚಿತ್ರವಲಯದಲ್ಲಿ. ಮೈಸೂರಿನ ತಾಂತ್ರಿಕ ತಜ್ಞರು 'ಲೀಡರ್ ವಿಶ್ವನಾಥ್' ಚಿತ್ರ ನಿರ್ಮಿಸಿ ಕಾರ್ಮಿಕರೇ ಸಂಘಟಿಸಿ–



ಕಾರ್ಮಿಕರ ಬಗ್ಗೆ ಚಿತ್ರ ಮಾಡಿದ್ದು ಹೊಸ ದಾಖಲೆ ಕನ್ನಡದಲ್ಲಿ.

ಮಾನು – ಸುರೇಶ್ ಹೆಬ್ಳೀಕರ್ ಹೆಚ್ಚಿಲ್ಲದಿದ್ದರೂ – ಜನಮನದಲ್ಲಿ ಉಳಿಯುವಷ್ಟು ಕೆಲಸ ಮಾಡಿದ್ದಾರೆ.

ಚಿತ್ರಗಳಿಗೆ ಟೈಟಲ್ ಕಾರ್ಡ್ಸ್‌ದೊಂದು ಭಾರೀ ಗದ್ದಲ. ಬಹುಪಾಲು ತಪ್ಪುಗಳೇ ಇರುತ್ತವೆ. ಕನ್ನಡ ಬಾರದವರ ಕೈಲೇ ಬರೆಸುವ ವಾಡಿಕೆ ಅನ್ನಿಸುತ್ತದೆ. ಹಾಗೆ ನೋಡಿದರೆ ಈ ವರ್ಷ ಬಹಳ ಮುದ್ದಾಗಿ – ತಪ್ಪಿಲ್ಲದೆ ಕಂಡದ್ದು 'ಮರೆಯದ ಹಾಡು' ಚಿತ್ರದ ಟೈಟಲ್ ಕಾರ್ಡ್‌ಗಳು. ಇನ್ನೂ ಒಂದೋ – ಎರಡೋ ಇರಬಹುದಾದರೂ ಬಹುಪಾಲು ಬೇಸರ ತರುವಂಥ ಉದಾಹರಣೆಗಳೇ ಇದ್ದವು. ●

# ಕನ್ನಡ ಚಿತ್ರಗಳ ವಿವರ

| ಕ್ರ.ಸಂ. | ಬಿಡುಗಡೆ ದಿನಾಂಕ | ಚಿತ್ರದ ಹೆಸರು | ನಿರ್ದೇಶಕರು | ನಟ-ನಟಿಯರು | |
|---|---|---|---|---|---|
| 34. | 17–7–1981 | ಮಹಾ ಪ್ರಚಂಡರು | ಜೋಸೈಮನ್ | ವಿಷ್ಣುವರ್ಧನ್, ಅಂಬರೀಷ್, ವಿಜಯ, ಪ್ರಭಾಕರ್, ಹಲಂ | ,, |
| 35. | 31–7–1981 | ಜಾಲ | ಶ್ರೀವತ್ಸ ರಂಗನಾಥ್<br>ಜಿ. ವಿ. ಎಸ್. ನಾರಾಯಣ್ | ಅನಿತಾ, ಪ್ರಕಾಶ್, ಸುಮಿತ್ರಾ | ಕಪ್ಪು-ಬಿಳುಪು |
| 36. | 7–8–1981 | ಸಿಂಹದ ಮರಿಸೈನ್ಯ | ಎಸ್.ವಿ. ರಾಜೇಂದ್ರಸಿಂಗ್(ಬಾಬು) | ಅರ್ಜುನ್‌ಸರ್ಜಾ, ಇಂದಿರಾ, ಅರುಣ, ಜಯಂತಿ | ವರ್ಣ |
| 37. | 7–8–1981 | ದೇವರ ಆಟ | ವಿ. ಸೋಮಶೇಖರ್ | ಶಂಕರ್‌ನಾಗ್, ಸುಲಕ್ಷಣ, ಮಧುಮಾಲಿನಿ, ಎಂ. ಪಿ. ಶಂಕರ್ | ,, |
| 38. | 14–8–1981 | ಭೂಮಿಗೆ ಬಂದ ಭಗವಂತ | ರವೀ | ಲೋಕೇಶ್, ಲಕ್ಷ್ಮೀ. ಜೈಜಗದೀಶ್, ಮಾ। ಲೋಹಿತ್ | ,, |
| 39. | 21–8–1981 | ಮಿಂಚಿನ ಬೆಳಕಲ್ಲಿ | ಕೆ. ಎಸ್. ಸತ್ಯನಾರಾಯಣ | ಅಶೋಕ್, ವಾಣಿ ದಿನೇಶ್, ನರಸಿಂಹರಾಜು | ,, |
| 40. | 3–9–1981 | ಗಣೇಶ ಮಹಿಮೆ | ಮಣಿಮುರುಗನ್ | ಅಶೋಕ್, ಆರತಿ, ಸುಂದರಕೃಷ್ಣ ಅರಸ್, ಶ್ರೀಲಲಿತಾ | ,, |
| 41. | 4–9–1981 | ರಾಜೇಶ್ವರಿ | ಎಚ್. ಎಂ. ಕೆ. ಮೂರ್ತಿ | ಅಶೋಕ್, ಸುಮಿತ್ರಾ, ಮಾನು, ಆಶಾಲತಾ | ,, |
| 42. | 11–9–1981 | ಗುರು-ಶಿಷ್ಯರು | ಭಾರ್ಗವ | ವಿಷ್ಣುವರ್ಧನ್, ಮಂಜುಳಾ, ರಾಜಾನಂದ್, ದ್ವಾರಕೀಶ್ | ,, |
| 43. | 25–9–1981 | ಮರೆಯದ ಹಾಡು | ಆರ್. ಎನ್. ಜಯಗೋಪಾಲ್ | ಅನಂತ್‌ನಾಗ್, ಮಂಜುಳಾ, ಸುಂದರಕೃಷ್ಣ ಅರಸ್, ಲೀಲಾವತಿ | ,, |
| 44. | 25–9–1981 | ಸ್ನೇಹಿತರ ಸವಾಲ್ | ಕೆ. ಎಸ್. ಆರ್. ದಾಸ್ | ವಿಷ್ಣುವರ್ಧನ್, ಮಂಜುಳಾ, ಅಂಬರೀಷ್, ಹಲಂ | ,, |
| 45. | 1–10–1981 | ಭರ್ಜರಿ ಬೇಟೆ | ಎಸ್.ವಿ. ರಾಜೇಂದ್ರಸಿಂಗ್(ಬಾಬು) | ಅಂಬರೀಷ್, ಶಂಕರ್‌ನಾಗ್, ಸಪ್ನಾ, ಜಯಮಾಲಾ | ,, |
| 46. | 2–10–1981 | ಮುನಿಯನ ಮಾದರಿ | ದೊರೆ-ಭಗವಾನ್ | ಶಂಕರ್‌ನಾಗ್, ರಾಜ್ಯಲಕ್ಷ್ಮೀ, ಮೋಹನ್, ಲೀಲಾವತಿ | ,, |
| 47. | 9–10–1981 | ಭಾಗ್ಯವಂತ | ಬಿ. ಎಸ್. ರಂಗಾ | ಆರತಿ, ಜೈಜಗದೀಶ್, ಮಾ। ಲೋಹಿತ್, ಡಾ। ರಾಜಕುಮಾರ್ | ,, |
| 48. | 9–10–1981 | ಶಿಕಾರಿ | ಸಿ. ಆರ್. ಸಿಂಹ | ಶ್ರೀನಾಥ್, ಮಂಜುಳಾ, ಪ್ರಭಾಕರ್ | ,, |
| 49. | 16–10–1981 | ಚದುರಿದ ಚಿತ್ರಗಳು | ಎನ್. ಟಿ. ಜಯರಾಮ ರೆಡ್ಡಿ | ಸುಂದರಕೃಷ್ಣ ಅರಸ್, ಆರತಿ, ಬಾಲಕೃಷ್ಣ | ,, |
| 50. | 23–10–1981 | ಘರ್ಜನೆ | ಸಿ. ವಿ. ರಾಜೇಂದ್ರನ್ | ರಜನೀಕಾಂತ್, ಮಾಧವಿ, ಶಿವರಾಂ, ದ್ವಾರಕೀಶ್ | ,, |
| 51. | 30–10–1981 | ನಂಬರ್ ಐದೂ ಯೆಕ್ಕ | ಶಿವಕುಮಾರ್ | ಶ್ರೀನಾಥ್, ಜಯಮಾಲಾ, ಮುಸುರಿ ಕೃಷ್ಣಮೂರ್ತಿ | ,, |
| 52. | 30–10–1981 | ಜೀವಕ್ಕೆ ಜೀವ | ಕೆ. ಎಸ್. ಆರ್. ದಾಸ್ | ಅನಂತ್‌ನಾಗ್, ಶಂಕರ್‌ನಾಗ್, ಸರಿತಾ, ದ್ವಾರಕೀಶ್ | ,, |
| 53. | 6–11–1981 | ಹೆಣ್ಣಿನ ಸೇಡು | ಸಮೀವುಲ್ಲಾ | ಶ್ರೀನಾಥ್, ಕೋಕಿಲಾ ಮೋಹನ್, ಗೀತಾ, ಹಲಂ | ,, |
| 54. | 6–11–1981 | ಬಂಗಾರದ ಮನೆ | ಬಸವರಾಜ್ ಕೆಸ್ತೂರ್ | ಅಶೋಕ್, ಶ್ರೀನಾಥ್, ರೋಜಾರಮಣಿ | ,, |
| 55. | 13–11–1981 | ಪ್ರೇಮ ಪಲ್ಲವಿ | ಎಸ್. ವೇಣುಗೋಪಾಲ್ | ಶ್ರೀನಾಥ್, ಸುನೀತಾ, ಅಶ್ವತ್ಥ್, ಲೀಲಾವತಿ | ,, |
| 56. | 20–11–1981 | ಮಂಗಳಸೂತ್ರ | ರಾಜೇಶ್‌ಕುಮಾರ್ | ರಾಜೇಶ್‌ಕುಮಾರ್, ಸರಳಾ, ವಾಸುದೇವರಾವ್ | ಕಪ್ಪು-ಬಿಳುಪು |
| 57. | 27–11–1981 | ಭಾಗ್ಯದ ಬೆಳಕು | ಕೆ. ವಿ. ಎಸ್. ಕುಟುಂಬ ರಾವ್ | ಆರತಿ, ಮಾನು, ಧೀರೇಂದ್ರಗೋಪಾಲ್, ಜಯಮಾಲಾ | ,, |
| 58. | 27–11–1981 | ನಮ್ಮಮ್ಮ ತಾಯಿ ಅಣ್ಣಮ್ಮ | ಸಿ. ಚಂದ್ರಶೇಖರ್ | ಸುಂದರಕೃಷ್ಣ ಅರಸ್, ಶ್ರೀಲಲಿತಾ, ಬಿ. ಸರೋಜಾದೇವಿ | ,, |
| 59. | 27–11–1981 | ಆಲೆಮನೆ | ಮೋಹನ್ ಕುಮಾರ್ | ಸುರೇಶ್ ಹೆಬ್ಳೀಕರ್, ರೂಪಾ ಚಕ್ರವರ್ತಿ, ಸುರೇಖಾ | ,, |
| 60. | 4–12–1981 | ಕೆರಳಿದ ಸಿಂಹ | ಚಿ. ದತ್ತುರಾಜ್ | ಡಾ। ರಾಜಕುಮಾರ್, ಸರಿತಾ, ಪಂಡರಿಬಾಯಿ, | ವರ್ಣ |
| 61. | 11–12–1981 | ಅವಳ ಹೆಜ್ಜೆ | ಭಾರ್ಗವ | ವಿಷ್ಣುವರ್ಧನ್, ಲಕ್ಷ್ಮೀ, ಅಂಬರೀಷ್, ದ್ವಾರಕೀಶ್ | ,, |
| 62. | 18–12–1981 | ಶ್ರೀಮಾನ್ | ಗೀತಪ್ರಿಯ | ಅನಂತನಾಗ್, ವಿಜಯಲಕ್ಷ್ಮೀ ಸಿಂಗ್, ಶ್ರೀನಿವಾಸಮೂರ್ತಿ | ,, |
| 63. | 18–12–1981 | ಶ್ರೀ ಎಡೆಯೂರು ಸಿದ್ಧಲಿಂಗೇಶ್ವರ ಮಹಿಮೆ | ಹುಣಸೂರು ಕೃಷ್ಣಮೂರ್ತಿ | ಆರತಿ, ಲೋಕೇಶ್, ಜೈಜಗದೀಶ್, ರಾಮಕೃಷ್ಣ, ಜಯಂತಿ | ,, |
| 64. | 25–12–1981 | ಪ್ರೀತಿಸಿ ನೋಡು | ಗೀತಪ್ರಿಯ | ವಿಷ್ಣುವರ್ಧನ್, ಆರತಿ, ಶ್ರೀನಿವಾಸಮೂರ್ತಿ, ಸುನೀತ | ,, |

ವಿಷ್ಣುವರ್ಧನ್, ಕಾಜಲ್‌ಕಿರಣ್

# ಸಾಹಸ ಸಿಂಹ


ಉದಯಕುಮಾರ್, ಚೇತನ್ ರಾಮರಾವ್, ವಜ್ರಮುನಿ

ಲಕ್ಷ್ಮೀ ಸಿನಿ ಪ್ರೊಡಕ್ಷನ್ಸ್ ಲಾಂಛನದಲ್ಲಿ ಬರುತ್ತಿರುವ ವರ್ಣಚಿತ್ರ. 'ನಾಗ-ಕಾಳ-ಭೈರವ' ನಿರ್ಮಿಸಿದ್ದ ಎಂ. ಪಾಂಡುರಂಗನ್, ಎಂ. ರಾಮಲಿಂಗಮ್ ಅವರುಗಳೇ ನಿರ್ಮಾಪಕರು.

ಯಶಸ್ವೀ ನಿರ್ದೇಶಕ ಎಂದು ಹೆಸರಾಗಿರುವ ಜೋ ಸೈಮನ್ ಈ ಚಿತ್ರದ ನಿರ್ದೇಶಕರು. ಸಾಮಾನ್ಯವಾಗಿ ಇವರ ಚಿತ್ರಗಳಿಗೆ ಛಾಯಾಗ್ರಹಣ ನಿರ್ವಹಿಸುವ ಎಚ್. ಜಿ. ರಾಜು ಅವರೇ ಈ ಬಾರಿಯೂ ಕೆಲಸ ಮಾಡಿದ್ದಾರೆ. ಅವರ ಚಮತ್ಕಾರಕ್ಕೆ ಈ ಚಿತ್ರದಲ್ಲಿ ಅವಕಾಶ ಬಹಳ ಎನ್ನಲಾಗಿದೆ.

ಮನು ಅವರ ಜನಪ್ರಿಯ ಕಾದಂಬರಿ 'ಚಕ್ರವ್ಯೂಹ'ದ ಆಧಾರದ ಮೇಲೆ ಸಿದ್ಧವಾಗಿರುವ ಈ ಚಿತ್ರಕ್ಕೆ ಕು. ನಾಗಭೂಷಣ್ ಅವರು ಚಿತ್ರಸಾಹಿತ್ಯ ಒದಗಿಸಿದ್ದಾರೆ. ನಾಗಭೂಷಣ್ ಅವರು ವಿಷ್ಣುವರ್ಧನ್ ಅವರ ಅಭಿನಯದ ಬಹುಪಾಲು ಚಿತ್ರಗಳಿಗೆ ಸಾಹಿತ್ಯ ನಿರ್ವಹಿಸಿದ್ದಾರೆ. ಉದಯಶಂಕರ್ ಹಾಗೂ ಜಯಗೋಪಾಲ್ ರಚಿಸಿರುವ ಹಾಡುಗಳು ಅತ್ಯಂತ ಜನಪ್ರಿಯವಾಗುತ್ತವೆಂಬ ಸುದ್ದಿ ಚಿತ್ರವಲಯದಲ್ಲಿದೆ.

ಜಾನ್ ಅವರು ಕಲೆ ವಿನ್ಯಾಸ ನಡೆಸಿರುವ ಈ ಚಿತ್ರದ ಡೆನ್‌ಸೆಟ್ ಒಂದನ್ನು ಕಂಠೀರವದಲ್ಲಿ ನಿರ್ಮಿಸಲಾಗಿ



ವಿಷ್ಣುವರ್ಧನ್



ಅರಿಕೇಸರಿ, ರಾಜ್ಯಲಕ್ಷ್ಮಿ



ತೂಗುದೀಪ ಶ್ರೀನಿವಾಸ್, ಪ್ರಭಾಕರ್, ಧೀರೇಂದ್ರಗೋಪಾಲ್

ತ್ರಿಂದೂ, ಆದರ ಶ್ರೀಮಂತಿಕೆ, ಸೌಂದರ್ಯಗಳ ಆಕರ್ಷಣೆ ವಿಶಿಷ್ಟವೆಂದೂ ಹೇಳಲಾಗಿದೆ.

ವಿಜಯನ್ ಅವರು ಸಾಹಸಕ್ಕೆ ಎತ್ತಿದ ಕೈ ಆಗುತ್ತಿದ್ದಾರೆ. ಅವರೇ ಭಾಗವಹಿಸಿಯೂ ಬಿಡುತ್ತಾರೆ. ಈ ಚಿತ್ರದಲ್ಲಿ ಅವರದೇ ಸಾಹಸ. ವಿಷ್ಣು ಅವರ ತುಂಟತನದ ಸಾಹಸಪ್ರಿಯತೆಗೆ ವಿಜಯ್ ಉತ್ಸಾಹ ಸೇರಿದರೆ ದಾಂಧಲೆಗೇನು ಕಮ್ಮಿ.

ಮುಂಬಯಿಯ ಕರುಣ್ ಅವರು ನೃತ್ಯ ನಿರ್ದೇಶಿಸಿದ್ದಾರೆ. ಹಿಂದಿಯ ತಾರೆ ಕಾಜಲ್ ಕಿರಣ್ ಅವರು ಮೊದಲ ಬಾರಿ ಕನ್ನಡದಲ್ಲಿ ಅಭಿನಯಿಸುತ್ತಿದ್ದಾರೆ. ರಾಜ್ಯಲಕ್ಷ್ಮಿ, ಧೀರೇಂದ್ರ ಗೋಪಾಲ್, ವಜ್ರಮುನಿ, ಉದಯ ಕುಮಾರ್, ಪ್ರಭಾಕರ್, ಸುಧೀರ್, ಅರಿಕೇಸರಿ, ಶಕ್ತಿ ಪ್ರಸಾದ್, ತೂಗುದೀಪ ಶ್ರೀನಿವಾಸ್, ರಣಧೀರ್, ಜ್ಯೂ. ನರಸಿಂಹರಾಜು, ಚೇತನ್ ರಾಮರಾವ್, ಮತ್ತು ಭೋಜರಾಜ್ ತಾರಾಗಣದಲ್ಲಿದ್ದಾರೆ. ವಿಷ್ಣುವರ್ಧನ್ ಈ ಚಿತ್ರದ ನಾಯಕ ನಟ. ಚಿತ್ರದ ಹೆಸರಿಗೆ ತಕ್ಕಂತೆ ಅನೇಕ ಸಾಹಸದ ದೃಶ್ಯಗಳೂ ಇವೆಯೆನ್ನಲಾಗಿದೆ. ಮುಂಬಯಿಯಲ್ಲಿ ಮೂರು ಹಾಡುಗಳು ಹಾಗೂ ಅತಿ ಮುಖ್ಯವಾದ ಕೆಲವು ದೃಶ್ಯಗಳನ್ನು ಚಿತ್ರೀಕರಿಸಲಾಗಿದೆ. ಬೆಂಗಳೂರಿನ ಸುತ್ತಮುತ್ತಲೂ ಚಿತ್ರೀಕರಣ ಆಗಿದೆ. ನಿರ್ಮಾಪಕರದೇ ಆದ 'ಶ್ರೀ ಲಕ್ಷ್ಮೀ ಚಿತ್ರಾ ಕಂಬೈನ್ಸ್' ವತಿಯಿಂದಲೇ ಚಿತ್ರದ ವಿತರಣೆ ಆಗಲಿದೆ.

ಕುತೂಹಲ - ಪ್ರಣಯ - ವಿಶಿಷ್ಟ ರೀತಿಯ ಸಾಹಸ ದೃಶ್ಯಗಳೂ ಮನರಂಜನೆ ಈ ಚಿತ್ರದ ವಿಶೇಷ ಆಕರ್ಷಣೆ ಎನ್ನಲಾಗಿದೆ.

ಚಿತ್ರದ ಯಶಸ್ಸಿನ ಬಗ್ಗೆ ತಂಡ – ನಿರ್ಮಾಪಕರು ತುಂಬ ಭರವಸೆ ಇಟ್ಟಿದ್ದಾರೆ. ●

# ಸಿನಿ ವಾರ್ತಾ ಸಂಚಯ

**ಭಾ**ರತದ ಸಿನಿಮಾ ಜಗತ್ತಿನಲ್ಲಿ ಸೆನ್ಸಾರ್ ಸಮಸ್ಯೆ ಆಗಾಗ ತಲೆಯೆತ್ತುತ್ತಿರುತ್ತದೆ.

ಧನಾರ್ಜನೆಯಲ್ಲಿ ದಾಖಲೆ ಮಾಡಿದ ವಿವಾದಾತ್ಮಕ ಕನ್ನಡ ಚಿತ್ರ 'ಅಂತ' ದ ಹಿಂದೀ ರೂಪ 'ಮೇರಿ ಆವಾಜ್ ಸುನೋ' ಚಿತ್ರ ಜಗತ್ತಿನಲ್ಲಿ ಇತ್ತೀಚೆಗೆ ಬಹಳಷ್ಟು ಸುದ್ದಿ ಮಾಡಿದೆ. ಒಮ್ಮೆ ಸೆನ್ಸಾರ್ ಆದ ಚಿತ್ರಕ್ಕೆ ಪ್ರದರ್ಶನಗೊಂಡಾಗ ಮುಟ್ಟುಗೋಲು. ಚಿತ್ರ ರಾಜಕೀಯಸ್ಥರನ್ನು ಕೆರಳಿಸಿದ್ದೇ ಕಾರಣ. ಆದರೆ ನ್ಯಾಯಾಲಯಗಳು ಕೆಲವೊಂದು ಎಡೆಗಳಲ್ಲಿ ಸ್ಟೇ ನೀಡಿ ಸೀಮಿತ ಅವಧಿಗಳಿಗೆ ಚಿತ್ರದ ಪ್ರದರ್ಶನಕ್ಕೆ ಅನುವು ಮಾಡಿಕೊಟ್ಟಿದ್ದಾರೆ. ಆದರೆ ಇದರಿಂದುಂಟಾದ ಬಿರುಗಾಳಿ ಸೆನ್ಸಾರ್ ವ್ಯವಸ್ಥೆಯ ಬಗ್ಗೆ ಮರುಚಿಂತನೆಗೆ ಅವಕಾಶ ನೀಡಿದೆ.

ಸಮಗ್ರ ರಾಷ್ಟ್ರಕ್ಕೆ ಅನ್ವಯಿಸುವಂಥ ಸೆನ್ಸಾರ್ ನೀತಿಯನ್ನು ರೂಪಿಸುವ ಅಗತ್ಯವನ್ನು ಇತ್ತೀಚೆಗೆ ಕಲ್ಕತ್ತಾ ಫಿಲ್ಮೋತ್ಸವದ ವೇಳೆ ಫಿಲ್ಮ್ ಫೆಡರೇಷನ್ ಅಧ್ಯಕ್ಷ ಕೆ. ಕೆ. ಚೌಧರಿಯವರು ಒತ್ತಿ ಹೇಳಿದರು. ಪ್ರಾದೇಶಿಕ ಸೆನ್ಸಾರ್ ಬೋರ್ಡುಗಳಿಗೆ ಹೆಚ್ಚಿನ ಸ್ವಾಯತ್ತತೆ ನೀಡುವ ಉಪಕ್ರಮವನ್ನು ಅವರು ಶ್ಲಾಘಿಸಿದರಾದರೂ ಭಾರತದಲ್ಲಿ ಸೆನ್ಸಾರ್ ಎಂಬುದು ಕ್ಯಾನ್ಸರೇ ಆಗಿದೆ ಎಂದು ಉಗ್ರವಾಗಿ ಟೀಕಿಸಿದರು. ಈ ನಡುವೆ ಸೆನ್ಸಾರ್ ಬೋರ್ಡಿನ ಮುಖ್ಯಸ್ಥರಾದ ಹೃಷೀಕೇಶ್ ಮುಖರ್ಜಿಯವರಿಗೋ ಬಲು ಇಕ್ಕಟ್ಟು. ಸೆನ್ಸಾರ್ ಬೋರ್ಡಿಗಿರುವುದು ಸ್ವಲ್ಪ ಮಟ್ಟಿನ ನಿಯಂತ್ರಣಾಧಿಕಾರ ಮಾತ್ರ. ಆದೇಶ ನೀಡಿ ಕಟ್ಟುನಿಟ್ಟಾಗಿ ಅವು ಪರಿಪಾಲಿಸಲ್ಪಡುವಂತೆ ಒತ್ತಡ ತರುವ ಸಾಮರ್ಥ್ಯವೇನೂ ಅದಕ್ಕಿಲ್ಲ; ಆ ಕೆಲಸ ಮಾಡಬೇಕಾದವರು ತೆಪ್ಪಗಿರುತ್ತಾರೆ. ವಯಸ್ಕರಿಗೆ ಮಾತ್ರ ಎಂದು ಮಂಜೂರಾದ ಚಿತ್ರಗಳನ್ನು ಪುಟಾಣಿಗಳು ಕೂಡ ನೋಡಬಹುದು ಈ ದೇಶದಲ್ಲಿ – ಎಂದು ಅವರ ಆತಂಕ. ಆದ್ದರಿಂದ ಸೆನ್ಸಾರ್ ಬೋರ್ಡು ಚಿತ್ರಗಳ ಗುಣಮಟ್ಟವನ್ನು ಹೆಚ್ಚಿಸುವುದರಲ್ಲಿ ಪರಿಣಾಮಕಾರಿಯಾಗುವ ವಿಷಯದಲ್ಲಿ ಅವರಿಗೆ ಭರವಸೆಯಿರುವ ಹಾಗೆ ಕಾಣುವುದಿಲ್ಲ. ಜನವರಿ ಮಾಸಾಂತ್ಯದಲ್ಲಿ ಅವರು ಸೆನ್ಸಾರ್ ಮಂಡಳಿಯ ಅಧ್ಯಕ್ಷತೆಯನ್ನು ಬಿಟ್ಟುಕೊಡುವ ಮಾತನ್ನೂ ಆಡಿದ್ದಾರೆ. ತಮ್ಮ ಚಿತ್ರ ನಿರ್ಮಾಣ ಕಾರ್ಯಕ್ಕೆ ಗಮನ ಕೊಡಲು ಸಾಧ್ಯವಾಗುತ್ತಿಲ್ಲ ಎಂಬ ನೆಪವನ್ನೇನೋ ನೀಡಿದ್ದಾರೆ. ಆದರೆ ಮುಖ್ಯ ಕಾರಣ ಸೆನ್ಸಾರ್ ವ್ಯವಸ್ಥೆ ತಂದೊಡ್ಡುತ್ತಿರುವ ತಲೆನೋವು ಎಂಬುದರಲ್ಲಿ ಅನುಮಾನವಿಲ್ಲ.

* * *

## ಚಿತ್ರಗಳನ್ನು ವಿದೇಶೀ ಮಾರುಕಟ್ಟೆಗೆ ಒಡ್ಡುವಾಗ ಅಡ್ಡಿ ಆತಂಕಗಳು

ಭಾರತೀಯ ಚಲನಚಿತ್ರಗಳಿಗೆ ವಿದೇಶೀ ಮಾರುಕಟ್ಟೆಗಳು ದೊರೆಯುವ ಸಂದರ್ಭಗಳು ಈಗ ತುಂಬಾ ಇವೆ. ಜಗತ್ತಿನ ನಾನಾ ಕಡೆಗಳಲ್ಲಿ ಆಗಾಗ ನಡೆಯುವ ಅಂತಾರಾಷ್ಟ್ರೀಯ ಚಿತ್ರೋತ್ಸವಗಳಿಂದಾಗಿ ಅನೇಕ ರಾಷ್ಟ್ರಗಳಲ್ಲಿ ಭಾರತದ ಚಿತ್ರಗಳ ಬಗ್ಗೆ ಆಸಕ್ತಿ ಬೆಳೆದಿದೆ. ಆದರೆ ನಮ್ಮ ಚಿತ್ರಗಳಿಗೆ ಬೇಡಿಕೆ ಹೆಚ್ಚುವುದಕ್ಕೆ ಕೆಲವೊಂದು ಅಡ್ಡಿ ಆತಂಕಗಳೂ ಇವೆ ಎಂಬುದನ್ನು ಸುಪ್ರಸಿದ್ಧ ದಿಗ್ದರ್ಶಕ ಮೃಣಾಲ್‌ಸೇನ್ ಇತ್ತೀಚೆಗೆ ವಿವರಿಸಿದ್ದಾರೆ. ಮುಂಬರುವ ಬರ್ಲಿನ್ ಚಿತ್ರೋತ್ಸವಕ್ಕೆ ಆಮಂತ್ರಿಸಲ್ಪಟ್ಟಿರುವ ಮೃಣಾಲ್‌ಸೇನ್ ಮೊದಲನೇದಾಗಿ ಹೊರಗೆ ಕಳಿಸಲು ಒಳ್ಳೆಯ ಗುಣಮಟ್ಟದ ಕಚ್ಚಾ ಫಿಲ್ಮ್ ಲಭಿಸದಿರುವುದನ್ನು ಪ್ರಸ್ತಾಪಿಸಿದ್ದಾರೆ. ಇದರಿಂದಾಗಿ ನಿರ್ಮಾಪಕರು ನೆಗೆಟಿವ್‌ಗಳನ್ನೇ ಒಯ್ದು ವಿದೇಶಗಳಲ್ಲಿ ಅವುಗಳನ್ನು ಸಂಸ್ಕರಿಸಿಕೊಳ್ಳಬೇಕಾದ ಅವಸ್ಥೆ ಉಂಟಾಗಿದೆ ಎನ್ನುತ್ತಾರೆ.

ಅಲ್ಲದೆ ವಿದೇಶೀ ಚಿತ್ರೋತ್ಸವಗಳಿಗೆ ಇಲ್ಲಿನ ಚಿತ್ರಗಳನ್ನು ಆಯ್ಕೆ ಮಾಡಿ ಕಳಿಸಿದರೆ ಮುಗಿಯಿತೆ? ಅಲ್ಲಿ ಅವುಗಳಿಗೆ ಸಾಕಷ್ಟು ಪ್ರಕಟಣೆ ಪ್ರಚಾರ ವ್ಯವಸ್ಥೆಯಿರುವುದಿಲ್ಲ. ಅಲ್ಲಿ ಅವುಗಳಿಗೆ ಬೇಡಿಕೆ ಬಂದು ವ್ಯವಹಾರ ಕುದುರಬೇಕಾದರೆ ಇಂಥ ಏರ್ಪಾಡುಗಳು ಬೇಕೇಬೇಕು ಎನ್ನುತ್ತಾರೆ ಸೇನ್. ಕೇವಲ ಪ್ರದರ್ಶನಗೊಂಡರೆ ಸಾಲದು ಬಹುಮಾನ ಗಳಿಸಿದರೂ ಸಾಲದು, ಸಾಕಷ್ಟು ಪ್ರಚಾರ ಬೇಕೇಬೇಕು ಎಂದು ಅವರ ಅಂಬೋಣ.

* * *

## ತಾಂತ್ರಿಕತೆಯಲ್ಲಿ ಹೊಸ ಹೆಜ್ಜೆ

70 ಎಂ.ಎಂ. ಚಿತ್ರಗಳನ್ನು ತಯಾರಿಸುವವರು ಇನ್ನು ಮುಂದೆ ಪರದೇಶಗಳನ್ನು ಆಶ್ರಯಿಸಬೇಕಾಗಿಲ್ಲ. ಅದಕ್ಕೆ ಬೇಕಾದ ಪ್ರೊಸೆಸಿಂಗ್ ಸೌಲಭ್ಯ ಇಟೆಲಿ, ಜರ್ಮನ್, ಬ್ರಿಟನ್, ಅಮೆರಿಕಾಗಳಲ್ಲಿ ಮಾತ್ರವಿದ್ದು ನಮ್ಮವರು ಹೆಚ್ಚಾಗಿ ಲಂಡನ್ನಿನಲ್ಲಿ ಆ ಕೆಲಸ ಮಾಡಿಕೊಂಡು ಬರುತ್ತಿದ್ದರು.

ಸದ್ಯದಲ್ಲಿಯೇ ಮದ್ರಾಸಿನ ಸಂಸ್ಥೆಯೊಂದು 70 ಎಂ.ಎಂ. ಚಿತ್ರ ತಯಾರಿಕೆಗೆ ಬೇಕಾದ ಸಕಲ ಸೌಲಭ್ಯಗಳನ್ನು ಒದಗಿಸಲಿದೆ. 35 ಎಂ. ಎಂ. ಚಿತ್ರಗಳನ್ನು 70 ಎಂ.ಎಂ.ಗೆ ಬ್ಲೋ-ಅಪ್ ಮಾಡಲು ಬೇಕಾದ ವ್ಯವಸ್ಥೆಯೂ ಅಲ್ಲಿರುತ್ತದೆ.

ಲಂಡನ್ನಿನಲ್ಲಿ ಒಂದು ಚಿತ್ರವನ್ನು 70 ಎಂ.ಎಂ. ಪ್ರೋಸೆಸ್ ಮಾಡಿ ತಯಾರಿಸುವುದಕ್ಕೆ ಸುಮಾರು ಹತ್ತು ಲಕ್ಷದಷ್ಟು ವೆಚ್ಚವಾಗುತ್ತಿತ್ತು. ಇಲ್ಲಿಯೇ ಅದು ಸಾಧ್ಯವಾಗುವುದರಿಂದ ಶ್ರಮ, ವೆಚ್ಚ ಎರಡೂ ಕಡಿಮೆಯಾಗುತ್ತದೆ.

ಖಾಸಗಿ ಸಂಸ್ಥೆಯೊಂದರ ಈ ಸಾಹಸ ಸಿನಿಮಾ ತಾಂತ್ರಿಕತೆಯಲ್ಲಿ ಒಂದು ಹೊಸ ಹೆಜ್ಜೆ.

* * *

## ಸಯೀದ್ ಮಿರ್ಜಾ ಅವರ ಹೊಸ ಚಿತ್ರಗಳು

ಕಳೆದ ವರ್ಷ 'ಅಲ್ಬರ್ಟ್ ಪಿಂಟೋ' ಚಿತ್ರದಿಂದ ಗಮನ ಸೆಳೆದ ಸಯೀದ್ ಮಿರ್ಜಾ ತಾನು ತಯಾರಿಸಲಿರುವ ಮುಂದಿನ ಚಿತ್ರಕ್ಕೆ ಕೇಂದ್ರ ಸರಕಾರದ ನೆರವಿನ ಆಶ್ವಾಸನೆ ಪಡೆಯುವುದರಲ್ಲಿ ಯಶಸ್ವಿಯಾಗಿದ್ದಾರೆ. ಪಶ್ಚಿಮ ಜರ್ಮನಿಯ ಒಂದು ಸಂಸ್ಥೆ ಕೂಡ ಅವರ ನೆರವಿಗೆ ಬಂದಿದೆಯಂತೆ. ಚಿತ್ರದ ಹೆಸರು 'ಶ್ರೀಮಾನ್ ಜೋಶಿ ಇನ್ಸಾಫ್ ಕೆ ಲಿಯೆ ಅದಾಲತ್ ಚಲೇ' ಅಂತ. ಹೆಸರಿನ ಉದ್ದ ಸಾಕೆ! ಮಿರ್ಜಾರಿಗೆ ಉದ್ದ ಹೆಸರಿನ ಮೋಹ!

1975ರಲ್ಲಿ ಬಿಹಾರದ ಭೋಲ್‌ಪುರದ ರೈತರ ಆಂದೋಲನದ ಕುರಿತಾದ ವರದಿಯನ್ನಾಧರಿಸಿ ಮಿರ್ಜಾ ಇನ್ನೊಂದು ಚಿತ್ರ ತಯಾರಿಸುವ ಹವಣಿಕೆಯಲ್ಲಿದ್ದಾರೆ. ಬಂಗಾಳದ ಎಡಸರಕಾರ ಇದಕ್ಕೆ ಧನ ಸಹಾಯ ನೀಡಲಿದೆಯಂತೆ. ಅವರ ಶ್ರೀಮಾನ್ ಜೋಶಿಯ ಚಿತ್ರೀಕರಣ ಮುಂಬಯಿಯಲ್ಲಿಯೇ ನಡೆಯಲಿವೆ.

* *

## ಪರಾಂಜಪೆ ಚಿತ್ರವೂ ಬರಲಿದೆ:

'ಚಷ್ಮೆ ಬದ್ದೂರ್'ನಲ್ಲಿ ಕಂಡ ಯಶಸ್ಸಿನ ಸ್ಫೂರ್ತಿಯಿಂದ ತಮ್ಮ ಮುಂದಿನ ಚಿತ್ರಗಳ ಕುರಿತು ತುಂಬಾ ಉತ್ಸಾಹದಿಂದಿರುವ ಸಾಯಿ ಪರಾಂಜಪೆ 'ಕಚುವಾ ಬರ್ ಖಾಗೋಶ್' ಎಂಬ ಚಿತ್ರದ ದಿಗ್ದರ್ಶನಕ್ಕೆ ತೊಡಗಿದ್ದಾರೆ. ರಾಜ್ ಖೋಸ್ಲಾ ಲಾಂಛನದಲ್ಲಿ ಸಿದ್ಧವಾಗಬೇಕಾಗಿದ್ದ ಅವರ ಚಿತ್ರ ಸೆಟ್ಟೇರಲಿಲ್ಲ. ಕಮರ್ಶಿಯಲ್ ಸಿನಿಮಾದವರೊಡನೆ ಹೊಂದಾಣಿಕೆಯೆಂದರೆ ಸುಲಭವಲ್ಲ. 'ರಜನೀಗಂಧ' ಹಾಗೂ ಶತರಂಜ್ ತಯಾರಿಕೆಗೆ ನೆರವಾದ ಸುರೇಶ್ ಜಿಂದಾಲ್ ಪರಾಂಜಪೆಯವರ ಪ್ರತಿಭೆಯನ್ನು ಪಯೋಗಿಸಿ ಇನ್ನೊಂದು ಸ್ವಾರಸ್ಯದ ಚಿತ್ರ ನೀಡುತ್ತಾರೋ ನೋಡಬೇಕು. 'ಕಚುವಾ'ದಲ್ಲಿ ನಾಸಿರುದ್ದಿನ್ ಷಾ 'ಚಷ್ಮೆ ಬದ್ದೂರ್'ನ ಫರೂಖ್ ಶೇಖ್ ಮುಂತಾದವರು ಇರುವರೆಂದು ಗೊತ್ತಾಗಿದೆ.

– ವಿಹಂಗಮ



ಮರೆಯಲಾಗದ ಕಥೆ : ಸ್ಮಿತಾ, ಜೈಜಗದೀಶ್

# ಡೇವಿಡ್ : ಸವಿನೆನಪುಗಳ ಸರಮಾಲೆ



ಚಿತ್ರರಂಗದಲ್ಲಿ ಕೇಳಿ. ಕ್ರೀಡಾರಂಗದಲ್ಲ ಕೇಳಿ. ಡೇವಿಡ್ ಅಬ್ರಹಾಮ್ ಜತೆ ಪ್ರತ್ಯಕ್ಷವಾಗಲಿ ಪರೋಕ್ಷವಾಗಲಿ ಸಂಬಂಧಪಟ್ಟ ಯಾರನ್ನು ಬೇಕಾದರೂ ಕೇಳಿ. ಅವರು ಒಬ್ಬ ಅಪೂರ್ವ ಸಹೃದಯಿ ಮಾನವರಾಗಿದ್ದರು. ಯಾವತ್ತೂ ನಗುನಗುತ್ತ, ಹಾಸ್ಯ ಚಟಾಕಿ ಹೊಡೆಯುತ್ತ ಗೆಲವನ್ನು ಉಂಟುಮಾಡುತ್ತ ಖುಷಿಯನ್ನು ಹಂಚಿಕೊಳ್ಳುತ್ತಿದ್ದ ಪಕ್ಕಾ ಜಂಟಲ್‌ಮನ್ ಆಗಿದ್ದರು. ಉತ್ತಮ ನಟನಾಗಿದ್ದು, ಕ್ರೀಡಾಪಟುವಾಗಿದ್ದರು, ಇಂಗ್ಲಿಷ್, ಹಿಂದಿ, ಫ್ರೆಂಚ್‌ಗಳಲ್ಲಿ ವಾಗ್ಮಿಯಾಗಿದ್ದದ್ದು, ವೈಟ್ ಲಿಫ್ಟಿಂಗ್‌ನಲ್ಲಿ ಅಂತಾರಾಷ್ಟ್ರೀಯ ಮಟ್ಟದಲ್ಲಿ ತೀರ್ಪುಗಾರರಾಗಿದ್ದದ್ದು ಅವರ ಇತರ ಪ್ರತಿಭೆಗಳು. ಒಟ್ಟಿನಲ್ಲಿ ಅವರೊಬ್ಬ ಎಂದೂ ಮರೆಯಲಾಗದ ಮೋಡಿ ಹಾಕಿದ ಆತ್ಮೀಯ ವ್ಯಕ್ತಿ.

ಸುಮಾರು 42 ವರ್ಷಗಳ ಕಾಲ ಡೇವಿಡ್ ಹಿಂದಿ ಚಿತ್ರಗಳಲ್ಲಿ ಹಲವು ಬಗೆಯ ಪಾತ್ರ ಮಾಡಿದರು. ಚರಿತ್ರನಟನಲ್ಲದೆ ಖಳನಾಯಕ, ಕಾಮಿಡಿಯನ್ ಪಾತ್ರಗಳನ್ನೂ ಅವರು ವಹಿಸಿದ್ದಾರೆ. ಯಾವ ಪಾತ್ರದಲ್ಲೆ ಬರಲಿ, ಆ ಪಾತ್ರ ಎಷ್ಟೇ ಸಣ್ಣದಿರಲಿ, ಡೇವಿಡ್ ಅದರಲ್ಲಿ ಜೀವ ತುಂಬಿಸುತ್ತಿದ್ದರು. ಆದರೆ ಅವರೆಂದೂ ಚಿತ್ರಗಳಲ್ಲಿ ನಟಿಸಲಿಲ್ಲ. ಸಹಜವಾಗಿ ಪಾತ್ರವರಿತು ಆಡಿದರು. ಎಂದೂ ತಾರೆಯಾಗಲು ಪ್ರಯತ್ನಿಸಲಿಲ್ಲ. ಸಿನಿಮಾರಂಗದ ಯಾವ ಕೆಟ್ಟ ಚಟಗಳಿಗೂ ದುರ್ಜನ ಸಂಗಕ್ಕೂ ಬಲಿಬೀಳಲಿಲ್ಲ. ಕೆಸರಿನ ಕಮಲದಂತೆ ಚಿತ್ರರಂಗದಲ್ಲಿ ಇದ್ದೂ ಇಲ್ಲದಂತೆ, ನಗುನಗುತ್ತ ಯಾರ ಬಗ್ಗೆಯೂ ಕೆಟ್ಟ ಮಾತು ಆಡದೆ, ಆತ್ಮೀಯತೆಯಿಂದ ಇರುತ್ತಿದ್ದ ಡೇವಿಡ್ ತಾನು ಹೋದಲ್ಲಿ, ಮಾತನಾಡಿದಲ್ಲಿ ಆನಂದ ಹರಡಿಸುತ್ತಿದ್ದರು.

ಅಭಿನಯದಲ್ಲಿರುವಷ್ಟೆ ಆಸಕ್ತಿ ಅವರಿಗೆ ಆಟಗಳಲ್ಲಿ, ಪುಸ್ತಕಗಳಲ್ಲಿ, ಮಾತುಗಾರಿಕೆಯಲ್ಲಿ. ಡೇವಿಡ್ ಮಾತನಾಡಿದರೆ ಮುತ್ತು ಉದುರಿದಂತೆ. ಹೃದಯ ತುಂಬ ನಗು. ಒಳಗೊಳಗೆ ಖುಷಿ. ವರ್ಣಿಸಲಾಗದ ತೃಪ್ತಿ. ಇಪ್ಪತ್ತೈದು ವರ್ಷ ಅವರು ಮುಂಬಯಿಯಲ್ಲಿ ಫಿಲ್ಮ್‌ಫೇರ್ ಪ್ರಶಸ್ತಿ ಸಮಾರಂಭಕ್ಕೆ 'ಕಾಂಪೀರ್' ಮಾಡುತ್ತಿದ್ದರು.

ಯಹೂದಿಯಾದ ಡೇವಿಡ್ ಅಬ್ರಹಾಮ್ ಮುಂಬೈಯಲ್ಲಿ ಜೂನ್ 1, 1908ರಲ್ಲಿ ಹುಟ್ಟಿದರು. ಮುಂಬಯಿ ವಿಶ್ವವಿದ್ಯಾಲಯದಿಂದ ಅವರು ಬಿ.ಎ. ಮತ್ತು ಎಲ್‌ಎಲ್.ಬಿ. ಪರೀಕ್ಷೆ ಪಾಸಾಗಿದ್ದರು. ಕಾಲೇಜಿನಲ್ಲಿರುವಾಗಲೆ ಡೇವಿಡ್ ಇಂಗ್ಲಿಷ್-ಫ್ರೆಂಚ್‌ಗಳಲ್ಲಿ ಜನಪ್ರಿಯ ವಾಗ್ಮಿ. ಹಲವು ಪ್ರಶಸ್ತಿ ವಿಜೇತ.

ಸಹದಿಗ್ದರ್ಶಕನಾಗಿ ಡೇವಿಡ್ 1937ರಲ್ಲಿ ಚಿತ್ರರಂಗ ಹೊಕ್ಕರು. ಅವರ ಮೊದಲ ಚಿತ್ರ "ರೆಖಿಂಬೊ". ಭಾವನಾನಿ ದಿಗ್ದರ್ಶಿಸಿದ ಈ ಚಿತ್ರದ ನಾಯಕ ಸ್ಯಾಂಡೊ ಸುಂದರರಾವ್ ನಯಂಪಳ್ಳಿ. ಸುಮಾರು 250 ಚಿತ್ರಗಳಲ್ಲಿ ನಟಿಸಿದ ಡೇವಿಡ್ ಕೆಲವು ಚಿರಸ್ಮರಣೀಯ ಪಾತ್ರಗಳ ನೆನಪನ್ನು ನಮ್ಮ ಮನಸ್ಸಿನಲ್ಲಿ ಹಸಿರಾಗಿಸಿ ಹೋಗಿದ್ದಾರೆ. "ಜಾಗ್ರತಿ", "ಜಂಗ್‌ಬಹಾದೂರ್" "ಕಿಸ್ಮತ್", "ಹಿಮಾಲಯ್ ಕಿ ಬೇಟಿ", "ದ್ರೌಪದಿ" (ಶಕುನಿ ಪಾತ್ರ), "ಮಂಗಲಾ", "ಅನುಪಮಾ", "ಚುಪಕೆ ಚುಪಕೆ", "ಖೂಬ್‌ಸೂರತ್" ಇವು ಅವರ ಕೆಲವು ಸ್ಮರಣೀಯ ಚಿತ್ರಗಳು. ಬಹುಶಃ ಅವರ ಚಿತ್ರ ಜೀವನದ ಅತ್ಯಂತ ಹೃದಯಸ್ಪರ್ಶಿ ಪಾತ್ರ 'ಬೂಟ್ ಪಾಲಿಶ್'ನ ಚಾಚಾ ಜಾನ್. ಋಷೀಕೇಶ ಮುಖರ್ಜಿಯವರ "ಖೂಬ್‌ಸೂರತ್" ಅವರ ಕೊನೆಯ ಚಿತ್ರ.

ಬ್ರಹ್ಮಚಾರಿಯಾಗಿಯೇ ಬದುಕಿದ ಡೇವಿಡ್ ಅವರಲ್ಲಿ ಸ್ಥಿತಪ್ರಜ್ಞನ ಹಲವು ಲಕ್ಷಣಗಳು ಮೇಳೈಸಿದ್ದವು. ಅವರು ಸಿನಿಮಾ, ಆಟಗಳಲ್ಲಿ ಆಳವಾಗಿ "ಇನ್‌ವಾಲ್ವ್" ಆದರೂ ಅವನ್ನೆ ಹಚ್ಚಿಕೊಂಡಿರಲಿಲ್ಲ. ಸತತವಾಗಿ ಹೆಲ್‌ಸಿಂಕಿಯಿಂದ ಮೆಕ್ಸಿಕೊ ವರೆಗಿನ ಎಲ್ಲ ಒಲಂಪಿಕ್ಸ್‌ಗಳನ್ನು ಕಂಡು, ಅವುಗಳಲ್ಲಿ ಅನೇಕ ಬಾರಿ ವೈಟ್ ಲಿಫ್ಟಿಂಗ್ ಛಾಂಪಿಯನ್‌ಶಿಪ್ ಸ್ಪರ್ಧೆಯ ತೀರ್ಪುಗಾರರಾಗಿದ್ದರು.

ಮುಂಬಯಿಯಲ್ಲಿ ಕ್ರಿಕೆಟ್ ಕ್ಲಬ್ ಆಫ್ ಇಂಡಿಯಾದಲ್ಲಿ ಅವರಿಗೆ ಒಂದು ರೂಮ್ ಇತ್ತು. ಅವರನ್ನ ಸಿನೆಮಾದಲ್ಲಿ ಕಂಡದ್ದಕ್ಕಿಂತ ಹೆಚ್ಚಾಗಿ ಕ್ರಿಕೆಟ್ ಮ್ಯಾಚ್‌ನಲ್ಲಿ, ಫುಟ್‌ಬಾಲ್ ಆಟದ ಮೈದಾನದಲ್ಲಿ ನೋಡಬಹುದಿತ್ತು.

ಇಷ್ಟು ದೊಡ್ಡ ವ್ಯಕ್ತಿ ಮಗುವಿನಂತಿದ್ದರು. ಸರಳ ನೇರ, ಮುಗ್ಧ ಮಾತು. ಒಂದಿನಿತೂ ಆಡಂಬರವಿಲ್ಲ. ಪರಶುಕಲ್ಲಿನಂತೆ ಅವರು ಮಾತನಾಡಿದರೆ, ನಡೆದಾಡಿದರೆ ಅಲ್ಲಿ ಹರ್ಷದ ಹೊನಲು ಹರಿಯುತ್ತಿತ್ತು. ಭಾರತೀಯ ಚಿತ್ರರಂಗದಲ್ಲಿ, ಕ್ರೀಡಾರಂಗದಲ್ಲಿ, ವಾಗ್ಮಿಗಳ ಕೂಟಗಳಲ್ಲಿ ಡೇವಿಡ್ ಅಬ್ರಹಾಮ್ ಎಂಬ ಹೆಸರು ಆನಂದದ ಸಂಕೇತವಾಗಿಯೇ ಚಿರಸ್ಥಾಯಿಯಾಗುತ್ತದೆ.

ಫೋಟೊ, ಲೇಖನ: ಗುಲ್ವಾಡಿ



ಡೇವಿಡ್ - ಸುರೇಖಾ ಕೆ. ಎ. ಅಬ್ಬಾಸ್‌ರ "ಬಂಬಯಿ ರಾತ್ ಕಿ ಬಾಹೋಂ ಮೆ" ಚಿತ್ರದಲ್ಲಿ.

# ಸಿ. ರಾಮಚಂದ್ರ: ಸಂಗೀತದಲ್ಲಿ ಕಾಮನಬಿಲ್ಲು ರಚಿಸಿದ ಜಾದೂಗಾರ

"ಕಿತನಾ ಹಸೀ ಹೈ ಮೌಸಮ್ ಕಿತನಾ ಹಸೀ ಸಫರ್ ಹೈ................." (ಆಝಾದ್), "ಏ ಜಿಂದಗೀ ಉಸೀಕಿ ಹೈ ಜೋ ಕಿಸೀಕಾ ಹೋಗಯಾ......" (ಅನಾರ್ಕಲಿ), "ಈನಾ ಮೀನಾ ಡೀಕಾ..." "ಸಂಡೇ ಕೆ ಸಂಡೇ...", "ಧೀರೇಸೆ ಆಜಾ ಆಖಿಯಾಂ ಮೆಂ... "ಓ ಬೇಟಾಜೀ ಕಿಸ್ಮತ್ ಕಿ ಹವಾ ಕಭಿ ನರಮ......" (ಅಲಬೇಲಾ) ಮೊದಲಾದ ಸುಮಧುರ ಹಾಡುಗಳಿಂದ ಜನಪ್ರಿಯರಾಗಿ, ವಾದ ವಿವಾದಕ್ಕೊಳಪಟ್ಟ ಶ್ರೇಷ್ಠ ಸಿನಿಮಾ ಹಾಡುಗಾರ ಮತ್ತು ಸಂಗೀತ ದಿಗ್ದರ್ಶಕ ಚಿತಲ್‌ಕರ್ ರಾಮಚಂದ್ರ ತನ್ನ 63ನೆಯ ವಯಸ್ಸಿನಲ್ಲಿ ಮುಂಬಯಿಯ ಕೆ. ಈ. ಎಂ. ಆಸ್ಪತ್ರೆಯಲ್ಲಿ ಜನವರಿ 5ರಂದು ಬೆಳಿಗ್ಗೆ 5 ಗಂಟೆಗೆ ತೀರಿಕೊಂಡಾಗ ಹಿಂದಿ ಚಿತ್ರರಂಗದ ಒಂದು ಹಳೆಯ ಅಧ್ಯಾಯ ಪರಿಸಮಾಪ್ತಿಗೊಂಡಿತು.

ಚಿತ್ರರಂಗದ ಮಹಾ ಚಟಗಳಲ್ಲಿ ಒಂದಾದ ಕುಡಿತ — ವಿಪರೀತ ಕುಡಿತ — ಇನ್ನೊಬ್ಬ ಪ್ರತಿಭಾವಂತನನ್ನು, ಅದಕ್ಕೆ ಮಿಗಿಲಾಗಿ, ಒಬ್ಬ ಜಂಟಲ್‌ಮನ್ ವ್ಯಕ್ತಿಯನ್ನು ಬಲಿತೆಗೆದುಕೊಂಡಿತು. ಸುಮಾರು 40 ವರ್ಷಕಾಲ ಚಿತ್ರರಂಗದಲ್ಲಿ ಸಂಗೀತಲಹರಿಯ ಪವಾಡಪುರುಷ ಎನಿಸಿಕೊಂಡ ರಾಮಚಂದ್ರ ಕೇವಲ ಸಂಗೀತಕಾರನಾಗಿರಲಿಲ್ಲ. ಅಪೂರ್ವ ರಸಿಕ ಮಿತ್ರ, ವಿನೋದಪಟು ಹಾಗೂ ಪ್ರಾಮಾಣಿಕ ಕಲಾವಿದರಾಗಿದ್ದರು. ಸ್ವತಃ ಹಾಡುಗಾರರಾಗಿದ್ದ ರಾಮಚಂದ್ರ ಅವರು ಹಾರ್ಮೋನಿಯಂ ನುಡಿಸುತ್ತ ಹಾಡುತ್ತ ಕುಣಿಯುತ್ತಿರುವುದನ್ನು ಕಂಡಾಗ ಪ್ರೇಕ್ಷಕವರ್ಗವೇ ಕುಣಿಯುತ್ತಿತ್ತು. ತೀರಾ ಇತ್ತೀಚೆಗೆ, ಅವರು ಸಾಯುವ ಒಂದು ತಿಂಗಳ ಮೊದಲು ಅವರ ಕಾರ್ಯಕ್ರಮಕ್ಕೆ ನಾನು ಹೋಗಿದ್ದೆ. 63ನೆಯ ವಯಸ್ಸಿನಲ್ಲಿ ಕೂಡಾ ಅವರಲ್ಲಿದ್ದ ಹುರುಪು, ಲವಲವಿಕೆ, ಸುಮಧುರ ಹಾಡುವಿಕೆಯುಗತ್ತು, ಶ್ರೋತೃಗಳನ್ನು ಸಂಮೋಹನಗೊಳಿಸಿ ಯಾವುದೋ ಅಲೌಕಿಕ ಪ್ರಪಂಚದಲ್ಲಿ ತೇಲಾಡಿಸುವ ಮ್ಯಾಜಿಕ್ ಕಂಡು ಮಂತ್ರಮುಗ್ಧನಾಗಿದ್ದೆ. ಅಂದು ಸ್ವತಃ ಅವರು ತಮ್ಮ ಹಳೆಯ ಚಿತ್ರಗಳ ಹಾಡುಗಳನ್ನು ಹಾಡಿದ್ದರು.

ಗೌರವ ವರ್ಣ, ಬಿಳಿ ಸಫಾರಿಯಲ್ಲಿರುತ್ತಿದ್ದ ರಾಮಚಂದ್ರ ಬಲು ಆಕರ್ಷಕ ವ್ಯಕ್ತಿ. ಒಳ್ಳೆ ಉಡುಪು, ಒಳ್ಳೆ ಮಾತು, ಒಳ್ಳೆ ಸಂಗೀತ ಇದು ಅವರ ಜೀವನದ ಸೂತ್ರ. ಜೀವನದಲ್ಲಿ ಉತ್ತಮವಾದುದನ್ನೆಲ್ಲ ಅವರು ಪ್ರೀತಿಸಿದರು. ಈ ರಸಿಕ ತನ್ನ ಸುತ್ತಲೂ ಇರುವವರನ್ನು ಪ್ರತಿಕ್ಷಣ ಖುಷಿಪಡಿಸುತ್ತಿದ್ದರು.

ನಾಲ್ವತ್ತು ವರ್ಷಗಳ ಹಿಂದೆ – 1942ರಲ್ಲಿ ಸಿ. ರಾಮಚಂದ್ರ ಹಾಡುಗಾರನಾಗಿ – ಚಿತಲ್‌ಕರ್ ಎಂದೇ ಚಿತ್ರರಂಗ ಪ್ರವೇಶಿಸಿದರು. ಅವರು ಸಂಗೀತ ದಿಗ್ದರ್ಶಿಸಿದ ಮೊದಲ ಚಿತ್ರ "ಸುಖೀ ಜೀವನ". ಅವರು ಸಂಗೀತ ಕೊಟ್ಟ ಕೆಲವು ಅತ್ಯಂತ ಜನಪ್ರಿಯ ಚಿತ್ರಗಳು "ಅಂದಾಜ್", "ಅನಾರ್ಕಲಿ", "ಅಲಬೇಲಾ" "ನವರಂಗ್" "ಶೆಹನಾಯಿ", "ಸರಗಮ್", "ಪತಂಗಾ", "ಸಮಾಧಿ" "ದೇವತಾ", "ಪರಛಾಯಿಯಾಂ", "ಯಾಸ್ಮಿನ್", "ಸ್ತ್ರೀ", "ರೂಠಾ ನ ಕರೊ", "ಪೈಗಾಮ್", "ಅಮರದೀಪ್", "ಶಾರದಾ", "ಬಹುರಾನಿ", "ಆಶಾ", ಇತ್ಯಾದಿ. ಅವರು ದಿಲೀಪಕುಮಾರ್, ರಾಜ್‌ಕಪೂರ್, ದೇವ್ ಆನಂದ್‌ಗೆ ಹಿನ್ನೆಲೆ ಹಾಡು ಹಾಡಿದ್ದಾರೆ.



### ರಾಕ್ - ಎನ್ - ರೋಲ್

ತನ್ನ ಅತ್ಯಂತ ಯಶಸ್ವೀ ದಿನಗಳಲ್ಲಿ – ಸುಮಾರು 1945ರಿಂದ 60ರ ವರೆಗೆ – ರಾಮಚಂದ್ರ ವಾದಗ್ರಸ್ತ ವ್ಯಕ್ತಿಯೂ ಆಗಿದ್ದರು. ಅವರು "ಈನಾ ಮೀನಾ ಡೀಕಾ", "ಸಂಡೇ ಕೆ ಸಂಡೇ" ಮೊದಲಾದ ಹಾಡುಗಳನ್ನು ಕೊಟ್ಟಾಗ, ಮಡಿವಂತರು ಸಿಡಿದೆದ್ದರು. 'ಸಿನಿಮಾ ಸಂಗೀತವನ್ನು ಈತ ಕುಲಗೆಡಿಸಿಬಿಟ್ಟರು' ಎಂದು ಆರೋಪಿಸಿದರು. ಆದರೆ ರಾಕ್-ಎನ್-ರೋಲ್ ಸಂಗೀತ ಕೊಟ್ಟ ರಾಮಚಂದ್ರರೇ ಶಾಸ್ತ್ರೀಯ ಹಾಗೂ ಜಾನಪದ ಧಾಟಿಗಳಲ್ಲೂ ಅಷ್ಟೇ ಮಧುರ ಸಂಗೀತ ಕೊಟ್ಟು ಹೆಸರಾದರು. "ಅಂದಾಜ್", "ಅಲಬೇಲಾ", "ಅನಾರ್ಕಲಿ", ಚಿತ್ರಗಳು ಇವತ್ತಿಗೂ ಜನಪ್ರಿಯವಾಗಿರುವುದು ಅವುಗಳ ಸುಮಧುರ ಹಾಡುಗಳಿಂದಲೆ.

ರಾಮಚಂದ್ರರ ಸಂಗೀತಕ್ಕೆ ಸರಿಸಮನಾಗಿ ಸ್ಪರ್ಧೆ ಕೊಟ್ಟವರು ನೌಷದರವರು. ಇಬ್ಬರೂ ಸಮಕಾಲೀನರು. ಆದರೆ ಆತ್ಮೀಯ ಗೆಳೆಯರು. ನೌಷದರು ಶುದ್ಧ ಶಾಸ್ತ್ರೀಯ ಸಂಗೀತದ ಚೌಕಟ್ಟಿನಲ್ಲೆ ಚಿರಸ್ಮರಣೀಯ ಸಂಗೀತ ಕೊಟ್ಟರೆ ರಾಮಚಂದ್ರರು ಕ್ರಾಂತಿಕಾರಿ ಪ್ರಯೋಗಗಳನ್ನು ಮಾಡಿದರು.

ರಸಿಕರಾದ ರಾಮಚಂದ್ರರು ತಮ್ಮ ಆತ್ಮಚರಿತ್ರೆಯನ್ನು ಮರಾಠಿಯಲ್ಲಿ ಬರೆದಿದ್ದಾರೆ. ಅದರ ಹೆಸರು "ನನ್ನ ಜೀವನದ ಸರಗಮ್" (ಶಿವಾಜಿ ಪಾರ್ಕ್‌ನಲ್ಲಿದ್ದ ಅವರ ಮನೆಯ ಹೆಸರು ಕೂಡ 'ಸರಗಮ್' ಎಂದು). ಅದರಲ್ಲಿ ಅವರು ತನ್ನ ಸಂಗೀತ, ಪ್ರಣಯ, ಪ್ರಯೋಗಗಳ ಕುರಿತು ಮನಸ್ಸು ಬಿಚ್ಚಿ ಬರೆದಿದ್ದಾರೆ. "ಸೀತಾ" ಎಂದು ಅದರಲ್ಲಿ ಉಲ್ಲೇಖಿಸಿರುವ ವ್ಯಕ್ತಿ ಲತಾಮಂಗೇಶ್ಕರ್ ಎಂದು ಹಲವರು ಗುರುತಿಸಿದ್ದಾರೆ. ಒಂದು ಕಾಲದಲ್ಲಿ ಲತಾ ಮತ್ತು ರಾಮಚಂದ್ರರ ಪ್ರಣಯ ಜನಜನಿತವಾಗಿತ್ತು. ಈ ರಾಮಚಂದ್ರ ಮಾತ್ರ ಏಕಪತ್ನೀ ವ್ರತಸ್ಥರಾಗಿರಲಿಲ್ಲ. ಅವರಿಗೆ ಮುಂಬಯಿಯಲ್ಲಿ ಮತ್ತು ಪುಣೆಯಲ್ಲಿ ಹೀಗೆ ಇಬ್ಬರು ಪತ್ನಿಯರು. ಇಬ್ಬರನ್ನೂ ಚೆನ್ನಾಗಿ ನೋಡಿಕೊಂಡಿದ್ದರು.

ಒಳ್ಳೆ ಉಡುಪು ಅಂದರೆ ಅವರಿಗೆ ತುಂಬ ಮೆಚ್ಚಿಕೆ. ಬಲಗೈಗೆ ಯಾವಾಗಲೂ ಒಂದು ಬಂಗಾರದ ಹತ್ತಕಡಕು ಶೋಭಿಸುತ್ತಿತ್ತು. ಅವರು ಮುಂದಿನ ಎರಡು ತಿಂಗಳಲ್ಲಿ ವಿದೇಶಗಳಿಗೆ ಹೋಗುವವರಿದ್ದರು. ಅದಕ್ಕಾಗಿ ಒಂದು ಹೊಸ ಸೂಟನ್ನು ಹೊಲಿಸಲು ಕೊಟ್ಟಿದ್ದರು. ಆಸ್ಪತ್ರೆ ಸೇರುವ ದಿನ ಬೆಳಗ್ಗೆ ಟೈಲರ್‌ನಲ್ಲಿ ಹೋದಾಗ – ಅದು ತಯಾರಾಗಿರಲಿಲ್ಲ. ನಗೆಯಾಡುತ್ತ ರಾಮಚಂದ್ರರು ಹೇಳಿದರಂತೆ:

"ನೀನು ಇನ್ನು ಈ ರೀತಿ ತಡಮಾಡುತ್ತ ಹೋದರೆ ಸೂಟನ್ನು ನನ್ನ ಹೆಣಕ್ಕೆ ತೊಡಿಸಬೇಕಾದೀತು" ಎಂದು ಜೋಕ್ ಮಾಡಿದ್ದರಂತೆ.

ಟೈಲರ್ ಸೂಟನ್ನು ಆಸ್ಪತ್ರೆಯಲ್ಲಿ ತಂದು ಟ್ರಾಯಲ್ ಕೊಟ್ಟಾಗ ರಾಮಚಂದ್ರರು ಮತ್ತೆ ಇದೇ ಮಾತು ಹೇಳಿ ನಗೆಯಾಡಿದರಂತೆ. ಅದೇ ಸಂಜೆ ಅವರು 'ಕೋಮಾ'ಗೆ ಹೋದವರು ಮತ್ತೆ ಬದುಕಲಿಲ್ಲ. ಈ ಹೊಸ ಸೂಟನ್ನು ಅವರ ಶವಕ್ಕೆ ಹೊದಿಸಿಯೇ ಅಂತಿಮ ಯಾತ್ರೆ, ಅಗ್ನಿಸಂಸ್ಕಾರ ಮಾಡಲಾಯಿತು!

ಹಲವು ಮರಾಠಿ ಚಿತ್ರಗಳಿಗೆ ಸಂಗೀತ ಕೊಟ್ಟು, ಮರಾಠಿ ಚಿತ್ರಗಳನ್ನು ನಿರ್ಮಿಸಿದ ರಾಮಚಂದ್ರರು ಭಾಗವಹಿಸಿದ ಕೊನೆಯ ಸಾರ್ವಜನಿಕ ಕಾರ್ಯಕ್ರಮ ಮರಾಠಿ ಸಾಹಿತ್ಯ ಸಮ್ಮೇಳನ.

ಸಿ. ರಾಮಚಂದ್ರರು ತಮ್ಮ ಹಿಂದೆ ಬಹಳ ದೊಡ್ಡ ಪಿತೃಪ್ರಿಗಳ ಬಳಗ, ಇಬ್ಬರು ಮಕ್ಕಳು, ಕುಟುಂಬವನ್ನಲ್ಲದೆ ತನ್ನ ಕಾಲದ ಸುಮಧುರ ಸಂಗೀತವನ್ನೂ ಬಿಟ್ಟು ಹೋಗಿದ್ದಾರೆ. ಅವರ ಸಂಗೀತ ಎಲ್ಲಿಯವರೆಗೆ ಜನತೆಗೆ ಪ್ರಿಯವಾಗುವುದೋ ಅಲ್ಲಿಯ ವರೆಗೆ ಅವರೂ ನಮ್ಮ ಜತೆಯಲ್ಲೇ ಇರುತ್ತಾರೆ.

ಫೋಟೋ : ನಾಗರಾಜ್, ಶಿವರಂಜನ

ಶ್ರದ್ಧಾಂಜಲಿ ಲೇಖನ : ಸಂತೋಷಕುಮಾರ ಗುಲ್ವಾಡಿ



ಹಿಂದಿ ಚಿತ್ರರಂಗದಲ್ಲಿ ಬ್ಯಾಯ್‌ಫ್ರೆಂಡ್ ಗರ್ಲ್ ಫ್ರೆಂಡ್ ಪ್ರಕರಣಗಳನ್ನೇ ಬರೆಯುತ್ತ ಹೋದರೆ ಒಂದು ದೊಡ್ಡ ಗ್ರಂಥವಾದೀತು. ಹೆಲೆನ್ ಮತ್ತು ಅವಳ ಬ್ಯಾಯ್‌ಫ್ರೆಂಡ್ ಅರೋರಾ ವಿವಾಹ ಮಾಡಿಕೊಳ್ಳದೆ ಸುಮಾರು 20 ವರ್ಷ ಸಂಸಾರ ಮಾಡಿಕೊಂಡಿರಲಿಲ್ಲವೆ? ಆಮೇಲೆ ಒಂದು ರಾತ್ರಿ ಹೇಳದೆ ಕೇಳದೆ ಆತ ಪರಾರಿ. ಹೆಲೆನಳ ಹಣ, ಎಲ್ಲ ಆತನ ಹೆಸರಲ್ಲಿ. ಉಟ್ಟ ಬಟ್ಟೆಯಲ್ಲಿ ಹೆಲೆನ್ ಪ್ರಾಣ್ ಮನೆಗೆ ಓಡಿದಳು. ಆತ ಮತ್ತೆ ಎಲ್ಲ ಇತ್ಯರ್ಥ ಮಾಡಿದುದರಿಂದ ಹೆಲೆನ್ ಬಚಾವ್ ಆದಳು.

* * *



"ಪ್ರತಿಯೊಬ್ಬ ಹೆಸರಾಂತ ಗಂಡಸಿನ ಹಿಂದೆ ಆತನ ಹೆಣ್ಣು ಇರುತ್ತಾಳೆ. ಆತ ಮಾಡಿದುದು ತಪ್ಪು ಎನ್ನುತ್ತಾಳೆ. ಆತನನ್ನು ಸಿಂಹ ಎಂದು ಆಡಿನ ಮರಿಯಂತೆ ಆಡಿಸುತ್ತಾಳೆ" ಎಂಬ ಒಂದು ಮಾತಿದೆ. ಶ್ಯಾಮ್ ಬೆನಗಲ್ ಪ್ರಕೃತ ಹಿಂದಿ ಚಿತ್ರರಂಗದ ಹುಲಿಯೇ ಸರಿ. ಆದರೆ ಪತ್ನಿ ನೀರಾ ಮುಂದೆ ಅವರು ಇಲಿಮರಿ. ಆಕೆ ಹಾಕಿದ ಗೆರೆ ದಾಟುವವರಲ್ಲ. ಮಕ್ಕಳ ಪುಸ್ತಕದ ಲೇಖಕಿಯಾದ ನೀರಾ ಕೂಡ ಗಂಡನಿಗೆ ಸಮರ್ಥ ರೀತಿಯಲ್ಲಿ ಸಹಕಾರ ಕೊಡುತ್ತಾಳೆ. ಶ್ಯಾಮ್ ಬೆನಗಲರ ಯಶಸ್ಸಿನ ಹಿಂದೆ ಅವರ ಪ್ರತಿಭಾವಂತ ಹೆಂಡತಿಯ ಕೈವಾಡ ಖಂಡಿತವಾಗಿಯೂ ಇದೆ.

* * *




ರಿಶಿಕಪೂರನ ಬೇಡಿಕೆ ಸರಸರನೆ ಇಳಿಯತೊಡಗಿದೆ. ಆತನು ಯಾವ ಹೊಸ ಚಿತ್ರಗಳಿಗೂ ಸಹಿ ಮಾಡಿದ್ದಿಲ್ಲ. ಹೀಗೇಕೆ? ಹಲವು ಹೊಸ ಪ್ರತಿಭಾವಂತ ತರುಣರ ಮುಂದೆ ಆತನ ದೌರ್ಬಲ್ಯಗಳು ಬೆಳಕಿಗೆ ಬಂದಿವೆಯಂತೆ ಈ ಟೊಮೆಟೊ ಹೀರೋಗೆ ಈಗ ಬಲು ಚಿಂತೆ ಪಾಪ. ಡ್ಯಾಡಿ ರಾಜ್ ಕಪೂರ್ ಹತ್ತಿರ ಹೇಳಿ ಮಗನನ್ನು ಮತ್ತೆ "ಬೂಸ್ಟ್" ಮಾಡಲು ಬಂದು ಮಸಾಲೆ ಚಿತ್ರ ತೆಗೆಯಬೇಕು.

* * *





ಹಿಂದೆ ಸಚಿನ್ ಎಂಬ ಬ್ಯಾಯ್‌ಫ್ರೆಂಡ್ ಜತೆ ಆದ ಲಫಡಾದಿಂದ ಕಂಗೆಟ್ಟ ಸಾರಿಕಾಳ ತಾಯಿ ತನ್ನ ಮಗಳು ಎಲ್ಲಿಗೆ ಹೋಗುತ್ತಾಳೆಯೊ ಅವಳ ಹಿಂದೆ ಹೋಗಿಬಿಡುತ್ತಾಳೆ. ಆದರೆ ಸಾರಿಕಾ ತನ್ನ ಹಲವಾರು ಬ್ಯಾಯ್‌ಫ್ರೆಂಡ್‌ಗಳ ಜತೆ ಲಲ್ಲೆಯಾಡುವಾಗ ಅವಳ ತಾಯಮ್ಮ ನೋಡಿಯೂ ನೋಡದವಳಂತೆ ಇದ್ದು ಬಿಡುತ್ತಾಳೆ.

* * *

ಹ್ಞಾಂ! 'ಕೊಲ್ಲುವ ಸೌಂದರ್ಯ' ಅಂದೊಡನೆ ಸಿನಿಮಾರಂಗದ ಅನೇಕ ಮಾದಕ ಹುಡುಗಿಯರ ನೆನಪು ಬೇಡವೆಂದರೂ ಬರುತ್ತದೆ. ತನ್ನ ಸೆಕ್ಸೀ ಸೊಗಸಿನಿಂದ ಅನೇಕ ನಿರ್ಮಾಪಕರನ್ನು ಮೂರ್ಛೆಗೊಳಿಸಿ, ಹಲವು ಪ್ರೇಕ್ಷಕರ ನಿದ್ದೆಗೆಡಿಸುವ ರೀನಾರಾಯ್ ಶತ್ರುವಿನ ಸ್ನೇಹ ಮಾತ್ರ ಬಿಡಲು ಸಿದ್ಧಳಿಲ್ಲ. ಶತ್ರು ಕೋಮಲ್‌ಳನ್ನು ವಿವಾಹವಾಗಿ ಒಮ್ಮೆಲೆ ಅವಳಿ ಜವಳಿ ಮಕ್ಕಳಾದ ಬಳಿಕವೂ ರೀನಾ ಆತನ ಹಿಂದೆ ಬಿದ್ದಿದ್ದಾಳೆ. ಹೇಗೂ ಧರ್ಮೇಂದ್ರ-ಹೇಮಾರವರ ಆದರ್ಶ ಇದ್ದೇ ಇದೆ ತಾನೆ? ರೀನಾರಾಯ್ ಓಡಾಟ ನೋಡಿದರೆ ಅವಳು ಅದೇ ಸನ್ನಾಹದಲ್ಲಿರುವಂತೆ ಕಾಣುತ್ತದೆ.

* * *





ಡ್ಯಾನ್ನಿಯ ಪ್ರಸಕ್ತ ಗೆಳತಿ ಕಿಮ್ ಕೂಡ ಇತ್ತೀಚೆಗೆ ಸಿನಿಮಾ ಪಾರ್ಟಿಗಳಿಗೆ ಬರುವಾಗ ಗಂಡಸರನ್ನು ಮೂರ್ಛೆಗೊಳಿಸಿ ಕೊಲ್ಲುವ ಸೌಂದರ್ಯದ ಉಡುಪುಗಳನ್ನು ಧರಿಸಿಯೆ ಬರುತ್ತಾಳೆ. ಆಕೆ ಉಡುಪು ಧರಿಸಿದ್ದಾಳೆ ಎಂದು ಬೇರೆಯುವರಿಗೆ ತಿಳಿಯದಷ್ಟು ಕಡಿಮೆ ಬಟ್ಟೆ ಹಾಕಿಕೊಳ್ಳುತ್ತಾಳೆ. ಅದಕ್ಕೇ ಹೇಳುವುದು ಸಿನಿಮಾ ತಾರೆಯರು ರಜತ ಪರದೆಗಿಂತ ಖಾಸಗಿ ಜೀವನದಲ್ಲಿ ಹೆಚ್ಚು ಸೆಕ್ಸಿಯಾಗಿರುವುದು ಎಂದು. ಇಲ್ಲಿ ಸೆನ್ಸಾರ್‌ಶಿಪ್ ರಗಳೆ ಇಲ್ಲವಲ್ಲ!

* * *



ಯೋಗಿತಾ ಬಾಲಿಯ ಕತೆ ನಿಮಗೆ ಗೊತ್ತೇ ಇದೆಯಲ್ಲ? ಅವಳಿಗೇನು ಬ್ಯಾಫ್ರೆಂಡ್ಸ್‌ಗಳಿಗೆ ಕಡಿಮೆ ಇಲ್ಲ. ಅವಳ ಮತ್ತು ಕಿಶೋರಕುಮಾರನ ಗೆಳೆತನ ಬ್ಯಾಫ್ರೆಂಡ್ ಆಗಿಯೆ ಆರಂಭಗೊಂಡದ್ದು. ಸದ್ಯ ಅವಳ ಬ್ಯಾಫ್ರೆಂಡ್ ಮಿಥುನ್ ಚಕ್ರವರ್ತಿ. ಆತನ ಹಿಂದೆ ಅರ್ಧ ಡಜನ್ ಗರ್ಲ್ ಫ್ರೆಂಡ್ಸ್‌ಗಳು. ಇವರ ಹುಚ್ಚು ಪ್ರಣಯದಾಟ ಬರೆದರೆ ಗಾಸಿಪ್ ಬರೆಯುತ್ತಾರೆ ಎನ್ನುವರು. ಆದರೆ ಗಾಸಿಪ್‌ಗಳೆಲ್ಲ ಈಗ ಸತ್ಯವಾಗತೊಡಗಿವೆ.

* * *

ಗರ್ಲ್ ಫ್ರೆಂಡ್ - ಬಾಯ್ ಫ್ರೆಂಡ್ ಎಂದರೆ ಹೇಗಿರುತ್ತದೆ ಎಂಬುದನ್ನು ನೀವು ಹಿಂದಿ ಚಿತ್ರರಂಗಕ್ಕೆ ಬಂದು ನೋಡಬೇಕು. ಅನೇಕ ತಾರೆಯರಿಗೆ ತಾವು ನಟಿಸಿದ ಚಿತ್ರಕ್ಕಿಂತ ಹೆಚ್ಚು ಫ್ರೆಂಡ್‌ಗಳಿರುತ್ತಾರೆ. ಬ್ಯಾಫ್ರೆಂಡ್ಸ್‌ಗಳನ್ನು ಬದಲಾಯಿಸುವುದರಲ್ಲಿ ಶಬನಾ ಅತ್ಯಂತ ಚಾಣಾಕ್ಷಳು. ನಮ್ಮ ರಾಜಕಾರಣಿಗಳು ಪಕ್ಷ ಬದಲಾಯಿಸುವುದಕ್ಕಿಂತ ವೇಗವಾಗಿ ಆಕೆ ಬ್ಯಾಫ್ರೆಂಡ್ಸ್‌ಗಳನ್ನು ಬದಲಾಯಿಸುತ್ತಾಳೆ. ಝರೀನಾ ವಹಾಬ್ ಅಂಥ ಇನ್ನೊಬ್ಬ ತಾರೆ. ಆದರೆ ಇತ್ತೀಚೆಗೆ ಆಕೆ ರಮೇಶ್ ನಾರಂಗನನ್ನು ಗಟ್ಟಿಯಾಗಿ ಹಿಡಿದಿದ್ದಾಳೆ. ಅದಕ್ಕೆ ಕಾರಣ ಅವಳ ಬೇಡಿಕೆ ಇಳಿದಿದೆ ಎಂಬುದಿರಬೇಕು.

* * *



ಪರ್ವಿನ್ ಬಾಬಿ ಈಗ ಎಷ್ಟು ಚೆಲುವೆಯಾಗಿ ಕಾಣುತ್ತಿದ್ದಾಳೆ ಅಂತೀರಾ? ನೋಡಿ. ಇಲ್ಲಿದೆ ಅವಳ ಇತ್ತೀಚಿನ ಬಿಸಿ ಬಿಸಿ ಫೋಟೋ. "ದಿಲ್ ಆಖಿರ್ ದಿಲ್ ಹೈ" ಚಿತ್ರದ ಶೂಟಿಂಗ್‌ಗೆ ಹೋದಾಗ ಕೋಣಾರ್ಕದ ಶಿಲ್ಪಗಳ ಸೆಟ್ಟಿಂಗ್ ನಡುವೆ ಈ ಜೀವಂತ ಶಿಲಾಬಾಲಿಕೆ ತನ್ನ ಸೌಂದರ್ಯವನ್ನೆಲ್ಲ ಬಹಿರಂಗಗೊಳಿಸುವಂತೆ ಆಕರ್ಷಕ ಭಂಗಿಯಲ್ಲಿ ನಿಂತಿದ್ದಳು. ವ್ಯತ್ಯಾಸ ಇಷ್ಟೆ: ಶಿಲಾವಿಗ್ರಹಗಳಿಗಿಲ್ಲದ ಬಟ್ಟೆ ಪರ್ವಿನ್ ಮೈಮೇಲೆ ಇದ್ದಿತ್ತು ಎಂಬುದು. ಅದೇನೇ ಇದ್ದರೂ ಪರ್ವಿನ್‌ಳ ಯೋಗಾಭ್ಯಾಸ ಅವಳಿಗೆ ಒಳ್ಳೆ "ಫಿಗರ್" ಕೊಟ್ಟಿದೆ. ರೇಖಾ ಬಳಿಕ "ಕೊಲ್ಲುವ ಸೌಂದರ್ಯ" ಪಡೆದಿದ್ದಾಳೆ.

* * *



ಕಮಲಾಹಾಸನ್ ರಿಶಿಕಪೂರ್‌ನ ಸೋಲಿಗೆ ಅತಿ ದೊಡ್ಡ ಕಾರಣ ಎಂಬುದು ಚಿತ್ರರಂಗದಲ್ಲಿ ಕೇಳಿ ಬರುವ ಮಾತು. ನಿರ್ಮಾಪಕರು, ದಿಗ್ದರ್ಶಕರು, ಹೆಣ್ಣು ತಾರೆಯರೆಲ್ಲ ಅವನ ಹಿಂದೆ ಬಿದ್ದಿದ್ದಾರೆ. ಕಮಲಾಹಾಸನ್ ಸೌಜನ್ಯ, ರಿಶಿಯ ಉಡಾಫೆ; ಕಮಹಾಸನ್‌ನ ನಗು, ರಿಶಿಯ ಕೋಪ; ಕಮಲಾಹಾಸನ್ ನೃತ್ಯ, ಅಭಿನಯ ಪ್ರತಿಭೆ, ರಿಶಿಯ ನಟನೆ ತಿಳಿಯದ ಮ್ಯಾನರಿಸಂಗಳು ಈಗ ಚಿತ್ರರಂಗದಲ್ಲಿ ಮಾತುಕತೆಯ ವಿಷಯಗಳಾಗಿವೆ. ಗಾಳಿ ಈಗ ರಿಶಿಯ ವಿರುದ್ಧ ಬೀಸಲಾರಂಭವಾಗಿದೆ. ಕಮಲಾ ಹಾಸನ್ ಹಿಂದಿ ಚಿತ್ರರಂಗಕ್ಕೆ ಬಂದ, ನೋಡಿದ, ಗೆದ್ದ.

— ಮಿಥುನ



# ಸುನಿಲ್‌ದತ್: ಮುಂಬಯಿಯ ಹೊಸ ಶರೀಫ್

ತಮ್ಮ ಚಿತ್ರರಂಗದ ಚೌಕಟ್ಟು ಬಿಟ್ಟು ಸಾರ್ವಜನಿಕ ಜೀವನದಲ್ಲಿ ಸಾಕಷ್ಟು ಕೆಲಸ ಮಾಡಿದ ಸಿನಿಮಾ ತಾರೆಯರನ್ನು ಗೌರವಿಸುವ ಪರಂಪರೆ ಮುಂಬಯಿ ಮಹಾನಗರಕ್ಕಿದೆ.

ಈ ಹಿಂದೆ ದಿಲೀಪ್‌ಕುಮಾರ್ ಮುಂಬಯಿಯ ಶರೀಫ್ ಆಗಿದ್ದರು. ಈಗ ಸಿನಿಮಾ ತಾರೆಯರ ಮಟ್ಟಿಗೆ ಇದು ಸುನೀಲ್‌ದತ್‌ಗೆ ಕೊಡುವುದು ಇನ್ನೊಂದು ಅವಕಾಶ.

ನೆರೆ ಹಾವಳಿ, ಬರಗಾಲ, ಅವಘಡಗಳು, ಯುದ್ಧ ಮೊದಲಾದ ದುರಂತಕಾಲದಲ್ಲಿ – ಅದು ಎಲ್ಲೇ ಆಗಲಿ ಸುನೀಲ್‌ದತ್ ಕೂಡಲೆ ನಿಧಿ ಸಂಗ್ರಹಿಸಿ ಸಹಾಯ ಕೊಡುತ್ತಿದ್ದರು. ಅದಕ್ಕೆ ಸ್ಫೂರ್ತಿಯಾಗಿ ಅವರ ಪತ್ನಿ ನರ್ಗೀಸ್ ಇದ್ದರು.

ರಾಜಕೀಯವಾಗಿ ದತ್ ಕುಟುಂಬ ಇಂದಿರಾ ಗಾಂಧಿಯವರಿಗೆ ಆತ್ಮೀಯರು. ಮಹಾರಾಷ್ಟ್ರದ ಮುಖ್ಯ ಮಂತ್ರಿಯಾಗಿ ಇತ್ತೀಚೆಗೆ ರಾಜೀನಾಮೆ ಕೊಟ್ಟ ಅಬ್ದುಲ್ ರಹಮಾನ್ ಅಂತುಳೆ ಕೂಡ ನಿಕಟ ಸ್ನೇಹಿತರು. ಅದೇನೆ ಇದ್ದರೂ ಸುನೀಲ್ ದತ್‌ಗೆ ಕೊಟ್ಟ ಈ ಗೌರವ ಸಿನಿಮಾ ರಂಗಕ್ಕೆ ಕೊಟ್ಟಿರುವ ಗೌರವವೇ ಸರಿ. ನರ್ಗಿಸ್ ಸ್ಮರಣೆಯಲ್ಲಿ ಹೆಚ್ಚು ಹೆಚ್ಚು ಸಮಾಜ ಸೇವೆ ಮಾಡಬೇಕು ಎಂದು ನಿರ್ಧರಿಸಿರುವ ಸುನೀಲ್ ದತ್‌ಗೆ ಶರೀಫ್‌ಗಿರಿ ಒಳ್ಳೆಯ ಅವಕಾಶ.

ಫೋಟೊ : ಶ್ಯಾಮ್        ಲೇಖನ : ಗುಲ್ವಾಡಿ



ಮಹಾರಾಷ್ಟ್ರ ರಾಜ್ಯಪಾಲ ಓ. ಪಿ. ಮೆಹರಾ ಮುಂದೆ ಸುನೀಲ್‌ದತ್ ಶರೀಫ್‌ಗಿರಿಯ ಪ್ರಮಾಣವಚನ ಸ್ವೀಕರಿಸುತ್ತಿರುವುದು.

# ಕಲ್ಪನಾ ಅಯ್ಯರ್‌ಗೆ ಪ್ರತಿಸ್ಪರ್ಧಿ- ಆರತಿ ಗುಪ್ತಾ

ತನ್ನಂತೆ ಕುಣಿಯುವವರು ಯಾರೂ ಇಲ್ಲ. ತನ್ನಂತೆ ಬಳ್ಳಿ ದೇಹದವರು ಬೇರೊಬ್ಬರಿಲ್ಲ. ತನ್ನ ತೊಡೆಗಳು ಲಕ್ಕ... ಹೀಗೆಂದುಕೊಂಡು ರುಬಾಬು ತೋರಿಸುತ್ತಿದ್ದ ಕಲ್ಪನಾ ಅಯ್ಯರ್‌ಗೆ ಈಗ ಒಬ್ಬ ನೇರ ಪ್ರತಿಸ್ಪರ್ಧಿ ದೊರೆತಿದ್ದಾಳೆ.

ಅವಳೇ ಆರತಿ ಗುಪ್ತಾ. ಕಲ್ಪನಾ ಮಾಡುವಂಥ ಎಲ್ಲ ಕೆಲಸಗಳನ್ನೂ ಆರತಿ ಮಾಡುತ್ತಾಳೆ. ಅಷ್ಟೆ ಅಲ್ಲ. ಆರತಿ ಒಳ್ಳೆಯ ಈಜುಗಾರ್ತಿ. ಕಲ್ಪನಾಗಿಂತ ಹೆಚ್ಚು ಆಕರ್ಷಕವಾಗಿದ್ದಾಳೆ. ಸೆಕ್ಸಿಯಾಗಿದ್ದಾಳೆ.

ಕಲ್ಪನಾ ಒಂದು ನೃತ್ಯಕ್ಕೆ ಹತ್ತು ಸಾವಿರ ಕೇಳಿದರೆ ಆರತಿ ಎಂಟಕ್ಕೆ ಬರುತ್ತಾಳೆ. ಕಲ್ಪನಾ ಡಿಸ್ಕೊದಲ್ಲಿ ಕುಣಿದರೆ, ಆರತಿ ಸ್ವಿಮ್ಮಿಂಗ್‌ಪೂಲ್ ಡ್ಯಾನ್ಸ್ ಮಾಡುತ್ತಾಳೆ. ಹೀಗೆ ನಡೆದಿದೆ ಈ ಕೋಳಿಕಾಳಗ.

ಫೋಟೋ : ನಾಗರಾಜ್



ಕಲ್ಪನಾ ಅಯ್ಯರ್ – ಡಿಸ್ಕೋ ನೃತ್ಯಗಾತಿ



ಆರತಿ ಗುಪ್ತಾ– ಈಜು ಸುಂದರಿ

# ಹೊಸ ತಾರೆಯ ಉದಯ ಅಜಯ್



ನವತಾರಾ ಜೋಡಿ ಅಜಯ್ ಮತ್ತು ಅಮೃತಾ ಸಿಂಗ್

ಸಿನಿಮಾ ತಾರೆಯರಾಗಿ ಯಶಸ್ವಿಯಾದ ಹೆಚ್ಚಿನವರೆಲ್ಲ ತಮ್ಮ ತಮ್ಮ ಮಕ್ಕಳನ್ನು ಮತ್ತೆ ಸಿನಿಮಾ ತಾರೆಯರನ್ನಾಗಿ ಮಾಡಿಬಿಡುತ್ತಿದ್ದಾರೆ. ರಾಜಕಪೂರ್, ಸುನೀಲ್‌ದತ್, ರಾಜೇಂದ್ರ ಕುಮಾರ್, ದೇವ್ ಆನಂದ್ ಮತ್ತು ಈಗ ಧರ್ಮೇಂದ್ರ.

ಧರ್ಮೇಂದ್ರನ ಮಗ ಅಜಯ್ (ಅಥವಾ ಮುದ್ದಿನಿಂದ ಕರೆಯುವಂತೆ ಸನ್ನಿ)ನನ್ನು ತಾರೆ ಮಾಡುವ ತಯಾರಿ ಕಳೆದ ಒಂದೂವರೆ ವರ್ಷಗಳಿಂದ ನಡೆಯುತ್ತಿತ್ತು. ಈ ತಾರೆ ಸಿದ್ಧವಾದ ಸಂಗತಿಯನ್ನು ಬಹಳ ಸಾಂಪ್ರದಾಯಿಕತನ ಹಾಗೂ ವಿಜೃಂಭಣೆಯಿಂದ ಪ್ರಚಾರ ಮಾಡಲಾಯಿತು.

ಅಂದು ಬೆಳಿಗ್ಗೆ ಧರ್ಮೇಂದ್ರನ ಮನೆಯಲ್ಲಿ ವಿವಾಹ ನಡೆಯುತ್ತದೆಯೋ ಎಂಬಷ್ಟು ಗದ್ದಲ. ಬೆಳಿಗ್ಗೆ ಹವನ, ಪುರೋಹಿತರ ಮಂತ್ರ ಇತ್ಯಾದಿ. ಹನ್ನೊಂದು ಘಂಟೆಗೆ ಮೆಹಬೂಬ್ ಸ್ಟುಡಿಯೋದಲ್ಲಿ "ಬೇತಾಬ್" ಚಿತ್ರೀಕರಣದ ಮುಹೂರ್ತ. ಅದು ಅಜಯನ ಮೊದಲ ಚಿತ್ರ. ಅಲ್ಲಿ ಚಿತ್ರರಂಗದ ಅನೇಕ ಹಿರಿಯರೆಲ್ಲ ಜಮಾಯಿಸಿದ್ದರು.

ವಿಜಯತಾ ಫಿಲ್ಮ್ಸ್‌ರವರ 'ಬೇತಾಬ್' ದಿಗ್ದರ್ಶನ ರಾಹುಲ್ ರಾವೈಲ್. ಮೊದಲ ದಿನದ ಚಿತ್ರೀಕರಣಕ್ಕೆ ಬೆಂಗಳೂರಿನ ಗಾಜಿನ ಅರಮನೆಯಂಥ ಗಾಜಿನ ಮನೆಯ ಸೆಟ್ ಭವ್ಯರೀತಿಯಲ್ಲಿ ಹಾಕಲಾಗಿತ್ತು. ದಿಲೀಪ್ ಕುಮಾರ್ ಮುಖ್ಯ ಅತಿಥಿ. ರಾಜ್ ಕಪೂರ್ ಮೊದಲ ಶಾಟ್‌ಗೆ ನಿರ್ದೇಶಕರು.

ಮಾಮೂಲಿಯಂತೆ 11 ಘಂಟೆಯ ಮುಹೂರ್ತ ನಡೆದುದು ಮಧ್ಯಾಹ್ನ ಎರಡು ಘಂಟೆಗೆ. ಮೊದಲಿನ ಅರ್ಧ ಘಂಟೆ ಬರೇ ಛಾಯಾಗ್ರಾಹಕರ ಫೋಟೋ ವಿಧಿ ನಡೆಯಿತು. ರಾಜ್‌ಕಪೂರ್, ದಿಲೀಪ್ ಕುಮಾರ್, ಸಾಯಿರಾಬಾನು, ಧರಂ, ಸನ್ನಿ ಮತ್ತು ಅವನ ಹೊಸ ತಾರೆ ಅಮೃತಾ ಇವರುಗಳ ಫೋಟೋ ತೆಗೆದದ್ದೇ ತೆಗೆದದ್ದು. ಕೊನೆಗೆ ಧರ್ಮೇಂದ್ರ ಫೋಟೊಗ್ರಾಫರರಿಗೆಲ್ಲ ಕೈ ಜೋಡಿಸಿ ಮುಂದಿನ ಕಾರ್ಯ ಮಾಡಲು ಸಹಕಾರ ಕೇಳಿಕೊಂಡ.

ದಿಗ್ದರ್ಶಕ ರಾವೈಲ್ ತೆಂಗಿನಕಾಯಿ ಒಡೆದು ಮುಹೂರ್ತ ನಡೆಸಿದಾಗ ರಾಜ್‌ಕಪೂರ್ ನಿರ್ದೇಶನದ ಪ್ರಥಮ ಶಾಟ್‌ಗೆ ಸಿದ್ಧ. ಕ್ಲಾಪರ್ ಬೋರ್ಡ್ ಹಿಡಿದ ದಿಲೀಪ್ ಕುಮಾರ್ ತಮಾಷೆಯಾಗಿ ಕೇಳಿದ—

"ಯಾರ್ ಈ ಕ್ಲಾಪ್‌ಬೋರ್ಡ್ ಹೇಗೆ ಹಿಡಿಯಬೇಕೆಂದು ಹೇಳು. ನನಗೂ ದಿಗ್ದರ್ಶನ ಕೊಡು" ಎಂದಾಗ ರಾಜ್‌ಕಪೂರ್ ಬಿಟ್ಟುಕೊಡದೆ

"ನೀನು "ಜ್ವಾರ್ ಭಾಟಾ" ಚಿತ್ರಕ್ಕೆ ನಿಂತಾಗಲೂ ನಾನು ಕ್ಲಾಪ್‌ಬೋರ್ಡ್ ಹಿಡಿಯುತ್ತಿದ್ದೆನಲ್ಲ?" ಎಂದ. ('ಜ್ವಾರ್ ಭಾಟಾ' ದಿಲೀಪನ ಮೊದಲ ಚಿತ್ರ) ಸುತ್ತಲೂ ನಗು. ಅನಂತರ ಚಪ್ಪಾಳೆ. ಚಿತ್ರೀಕರಣದ ಮೊದಲ ಶಾಟ್‌ನಲ್ಲಿ ಸನ್ನಿ ಮತ್ತು ಅಮೃತಾ ಎರಡು ಸಂಭಾಷಣೆಯ ಮಾತು ಹೇಳಿದರು. ಧರ್ಮೇಂದ್ರ ಎಲ್ಲರ ಬಾಯಲ್ಲಿಯೂ ಲಾಡು, ಫೇಡಾ ತುರುಕಿದ. ಸೆಟ್ ಮೇಲಿನಿಂದ ಹೊರಬರುತ್ತಿದ್ದಂತೆ ಚಿತ್ರದ ಕೊನೆಯ ಹಾಡು ಕೇಳಿಸಿತು.—

"ಯೇ ಬಾದಲ್ ಯೂಂ ಗರಜತಾ ಹೈ
ಡರ್ ಕುಛ್ ಐಸಾ ಲಗ್‌ತಾ ಹೈ"

ಈ ಮುಹೂರ್ತಕ್ಕೆ ಹೇಮಾಮಾಲಿನಿ ಬಂದಿರಲಿಲ್ಲ.

ಫೋಟೋ : ನಾಗರಾಜ್ ಲೇಖನ: ಗುಲ್ವಾಡಿ



# ರಾಖಿ: ಏಕಾಂಗಿಯಾಗಿ ಸುಖಿ

ಹಿಂದಿ ಚಿತ್ರರಂಗದಲ್ಲಿ ರಾಖಿಯನ್ನು – ಕ್ಷಮಿಸಿ – ಆಕೆ ಕಡ್ಡಾಯವಾಗಿ ಹೇಳಲು ಅಪೇಕ್ಷಿಸುವಂತೆ ರಾಖಿ ಗುಲ್ಜಾರ್‌ಳನ್ನು ದಿವಂಗತ ಮೀನಾಕುಮಾರಿಯೊಂದಿಗೆ ಹೋಲಿಸುವುದುಂಟು. ಕಲಾಜಗತ್ತಿನಲ್ಲಿ ಹೋಲಿಕೆ ಸರಿಯಲ್ಲ. ಆದರೆ ಮೀನಾಕುಮಾರಿ ವಿವಾಹವಾಗಿ ಏಕಾಂತವನ್ನು ಅನುಭವಿಸಿದಂತೆ, ತನ್ನ ಚಿತ್ರಗಳಲ್ಲಿ ದುರಂತ ನಾಯಕಿಯಾಗಿ ಹೆಸರಾದಂತೆ, ಭಾರತೀಯ ಸ್ತ್ರೀಯ ಸಂಕೇತವಾಗಿ ಪರಿಗಣಿಸಲ್ಪಟ್ಟಂತೆ ರಾಖಿಯೂ ಇದ್ದಾಳೆ ಎಂಬುದು ನಿಜ.

ಅಭಿನಯದ ಮಟ್ಟಿಗೆ ಭಾವನಾತ್ಮಕವಾಗಿ ಮೀನಾಕುಮಾರಿಯ ಬಳಿಯೂ ರಾಖಿ ನಿಲ್ಲುವಂತಿಲ್ಲ ಎನ್ನುವವರೂ ಇದ್ದಾರೆ. ತನ್ನ ಬೊಜ್ಜು ಹಾಗೂ ಕುಳ್ಳುತನಗಳನ್ನು ಮರೆತು ರಾಖಿ ಗ್ಲಾಮರಸ್ ಆಗಿ ಕಾಣಲು ಶಕ್ತಿ ಮೀರಿ ಪ್ರಯತ್ನಿಸುತ್ತಾಳೆ – ಅಲ್ಲಿ ಸೋಲುತ್ತಾಳೆ ಎಂಬ ದೂರು ಕೂಡ ಇದೆ.

ಮೀನಾಕುಮಾರಿ ತನ್ನ ಹೃದಯವನ್ನು ಬಿಚ್ಚಿ ಮಾತನಾಡುತ್ತಿದ್ದಳು. ರಾಖಿ ಒಂದು ಮೂಕದೈವ. ಮೀನಾಕುಮಾರಿ ತನ್ನ ಮನದಳಲನ್ನು ತೋಡಿಕೊಳ್ಳುತ್ತಿದ್ದಳು. ಏಕಾಂಗಿತನ ಆಕೆಗೆ ಅಸಹ್ಯವಾಗಿತ್ತು. ರಾಖಿ ದುಃಖವನ್ನು ನುಂಗಿ ನಗುವ ಮುಖವಾಡವನ್ನು ಯಶಸ್ವಿಯಾಗಿ ಹಾಕಿಕೊಳ್ಳಬಲ್ಲಳು. ಅವಳ ಚರ್ಯೆ ಬಲು ನಿಗೂಢ. ಏಕಾಂಗಿತನ ಅವಳಿಗೆ ತುಂಬ ಖುಷಿಕೊಡುವಂತಿದೆ.

ಇಷ್ಟೆಲ್ಲ ಬರೆದುದು ರಾಖಿ ಮೀನಾಕುಮಾರಿಗಿಂತ ಸಂಪೂರ್ಣ ಭಿನ್ನ ವ್ಯಕ್ತಿತ್ವ, ಮಹತ್ವಾಕಾಂಕ್ಷೆ, ಯೋಜನೆಗಳಿರುವ ಕಲಾವಿದೆ ಎನ್ನುವುದನ್ನು ಹೇಳಲಿಕ್ಕಾಗಿ. ಬಹುಶಃ ರಾಖಿಯನ್ನು ಸರಿಯಾಗಿ ತಿಳಿದುಕೊಂಡವರು ಚಿತ್ರರಂಗದಲ್ಲಿ ಯಾರೂ ಇರಲಾರರು. ಆಕೆ ತಾರೆಯಾಗಿಯೂ ಅಷ್ಟೊಂದು ಯಶಸ್ವಿಯಾಗಿಲ್ಲ. ಗೃಹಿಣಿಯಾಗಿಯೂ ಸೋತಳು.

ರಾಖಿಯದು ವಿಶಿಷ್ಟ ದ್ವಂದ್ವ ವ್ಯಕ್ತಿತ್ವ. ಅವಳು ಭಾರತೀಯ ನಾರಿಯಾಗಿ ಚಿತ್ರಗಳಲ್ಲಿ ಯಶಸ್ವಿ. ವಾಸ್ತವಿಕ ಜೀವನದಲ್ಲಿ ಸೋತಳು. ಗ್ಲಾಮರಸ್ ಆಗಿ ಚಿತ್ರಗಳಲ್ಲಿ ಸೋತಳು, ಜೀವನದಲ್ಲಿ ಅನೇಕರನ್ನು ಮಂಕು ಮಾಡಿದಳು.

"ಕಭಿ ಕಭಿ" ಚಿತ್ರದಲ್ಲಿ ರಾಖಿಯ ಕಣ್ಣುಗಳ ಬಗ್ಗೆ ಅಮಿತಾಭ ಹೇಳುವ ಒಂದು ಮಾತಿದೆ :

"ರಾಖಿಯ ಕಣ್ಣುಗಳಲ್ಲಿ ಒಂದು ವಿಲಕ್ಷಣ ಸೆಳಕು ಇದೆ. ಅವು ಎಲ್ಲಿ ನೋಡುತ್ತವೆಯೋ ಅದನ್ನು ವಶೀಕರಿಸಿಕೊಂಡುಬಿಡುತ್ತವೆ."

ಈ ಮಾತು ರಾಖಿಯ ಜೀವನದಲ್ಲಿ ಸತ್ಯ. ಆಕೆ ತನ್ನ ಕಣ್ಣುಗಳಿಂದ ಹಲವರ ಹೃದಯಗಳನ್ನು ಸ್ವಾಧೀನಪಡಿಸಿಕೊಂಡಳು. ಆದರೆ ಬಹುಶಃ ಅವಳ ಕಣ್ಣುಗಳ ತೇಜಸ್ಸಿನ ಪ್ರಖರತೆಗೆ ಅವಳ ಜತೆ ಯಾರೂ ಬಾಳ್ವೆಕೆ ಬರಲಾರರು ಎಂದೆನಿಸುತ್ತದೆ.

ಚಿಕ್ಕಂದಿನಿಂದಲೆ ಬಂಗಾಳದ ಖ್ಯಾತ ಅಭಿನೇತ್ರಿ ಸಂಧ್ಯಾ ರಾಯ್ ಅವಳನ್ನು ಮೆಚ್ಚಿಕೊಂಡಳು. ಆದರೆ ಅವರಿಬ್ಬರೂ ಜತೆಯಲ್ಲಿರಲು ಸಾಧ್ಯವಾಗಲಿಲ್ಲ. ಪತ್ರಕರ್ತನಾಗಿ ರಾಖಿಯ ಕಣ್ಣುಗಳ ಹೊಳಪಿಗೆ ಮಂಕಾದ ಅಜಯ ವಿಶ್ವಾಸ್ ಅಗ್ನಿಸಾಕ್ಷಿಯಾಗಿ ಆಕೆಯನ್ನು ವಿವಾಹವಾದರೂ ಅವರ ವೈವಾಹಿಕ ಜೀವನ ತಾತ್ಕಾಲಿಕವಾಯಿತು. ಪ್ರೇಮಿಸಿ ವಿವಾಹವಾದ ಗುಲ್ಜಾರ್‌ನಿಂದ ರಾಖಿ ಬಲು ಬೇಗ ಬೇರೆಯಾದಳು. ಗುಲ್ಜಾರ್ ಘಟ



ಅಮಿತಾಭ ಮತ್ತು ರಾಖಿ

ಸ್ಫೋಟ ಮಾಡಿಕೊಳ್ಳೋಣವೆಂದರೂ ರಾಖಿ ಆದಕ್ಕೆ ಒಪ್ಪಿಲ್ಲ. ಗುಲ್ಜಾರ್‌ನಿಂದ ಬೇರೆಯಾದ ಬಳಿಕ 'ರಾಖಿ ಗುಲ್ಜಾರ್' ಎಂದು ತನ್ನನ್ನು ಕರೆಯಬೇಕೆಂದು ಅವಳು ಕಡ್ಡಾಯವಾಗಿ ಹೇಳಿಕೊಂಡಿದ್ದಾಳೆ. ಗಂಡಸರನ್ನು ಗೊಂದಲಕ್ಕೀಡು ಮಾಡಿದರೆ ರಾಖಿಗೆ ವಿಚಿತ್ರ ಆನಂದವಾಗುತ್ತಿರಬಹುದು. ರಾಖಿಯ ಈ ವಿಚಿತ್ರ ಪ್ರವೃತ್ತಿಯ ಬಗ್ಗೆ ಚಿತ್ರರಂಗದಲ್ಲಿ ಒಂದು ರೀತಿ ಶಾಯರಿ ಕೂಡ ಇದೆ:

ವೊ ಜೊ ಮಿಲತೆ ಥೆ ಕಭಿ ಹಮ್‌ಸೆ ದೀವಾನೋ ಕೀ ತರಹ್ ।
ಆಜ್ ಯೂಂ ಮಿಲತೆ ಹೈ ಜೈಸೆ ಕಭೀ ಪೆಹಚಾನ ನ ಥೀ ॥

"ತಪಸ್ಯಾ" ಚಿತ್ರದೊಂದಿಗೆ ರಾಖಿಯ ಅಭಿನಯ ಪ್ರತಿಭೆಗೆ ಮನ್ನಣೆ ಸಿಕ್ಕಿತು. ಆದರೆ ಆಕೆ "ಮುಕದ್ದರ್ ಕಾ ಸಿಕಂದರ್" ಚಿತ್ರದಲ್ಲಿ ವಿನೋದ್ ಖನ್ನನ ಜತೆ ಕೇಸಿನೋದಲ್ಲಿ ಆಧುನಿಕ ಉಡುಪು ಧರಿಸಿ ಮಾಡಿದ ನೃತ್ಯ ಖಂಡಿತ ಅವಳಿಗೆ ಒಪ್ಪುತ್ತಿರಲಿಲ್ಲ. "ರಾಖಿ ಗ್ಲಾಮರಸ್ ಆಗಲು ಏಕೆ ಪ್ರಯತ್ನಿಸಬೇಕು?" ಎಂದು ಅವಳ ಭಕ್ತರೂ ಕೇಳಿದರು. ಇತ್ತೀಚೆಗೆ "ಬಸೇರಾ" ಚಿತ್ರ ನೋಡಿದವರು "ರಾಖಿ ಇಂಥ ಪಾತ್ರಗಳಿಗೇ ಯೋಗ್ಯಳು" ಎಂದು ಮತ್ತೆ ಮೆಚ್ಚಿಕೆ ಸೂಚಿಸಿದರು. ಇದರ ಒಟ್ಟು ಅರ್ಥ ರಾಖಿ ಭಾರತೀಯ ನಾರಿಯ ದುಃಖಾಂತ ಪಾತ್ರಗಳನ್ನು ಮಾತ್ರ ಚೆನ್ನಾಗಿ ನಿರ್ವಹಿಸಬಲ್ಲಳು ಎಂಬುದು. ಅಂದರೆ ಅವಳ ನಟನೆಯ ವಿಸ್ತಾರಕ್ಕೆ ಮಿತಿಯಿದೆ. ಹೀಗೆಂದಾಕ್ಷಣ ರಾಖಿ ಪ್ರೇಮಿಗಳಿಗೆ ಕೋಪ ಬಂದೀತು. ಆದರೆ ಒಟ್ಟಿನಲ್ಲಿ ಗೃಹಸ್ಥಾಶ್ರಮದ ಸುಖಕ್ಕೆ ತಿಲಾಂಜಲಿಯನ್ನಿತ್ತು, ರಾಖಿ ಚಿತ್ರರಂಗದಲ್ಲಿ ಆ ಪ್ರಮಾಣದಲ್ಲಿ ಸಾಧಿಸಿದ್ದು ಬಹಳ ಕಡಮೆಯೆ.



ರಾಖಿ ಬಲು ಅಂತರ್ಮುಖಿ. ಆಕೆಯೆ ಹೇಳುವುದುಂಟು "ಪುಸ್ತಕಗಳೇ ನನ್ನ ನಿಜವಾದ ಗೆಳೆಯರು. ನಾನು ಅವುಗಳೊಡನೆ ಮಾತ್ರಸಂಭಾಷಣೆ ಮಾಡಬಲ್ಲೆ." ಅದನ್ನು ಬಿಟ್ಟರೆ ಅವಳು ಒಳ್ಳೆಯ ಅಡುಗೆ ಮಾಡುತ್ತಾಳೆ. ತನ್ನಷ್ಟಕ್ಕೆ ತಾನುಇರುವುದರಲ್ಲೆ ಆಕೆಗೆ ಸಂತೋಷ.

ಒಮ್ಮೆ ಆಕೆಗೆ ಕೇಳಿದ್ದೆ – "ಇಷ್ಟೆಲ್ಲ ಒಂಟಿ ಜೀವನದ ಒದ್ದಾಟ ಏಕೆ ಬೇಕಿತ್ತು?"

ಅವಳ ಮುಖದಲ್ಲಿನ ನಗು ಮಾಯವಾಗಿತ್ತು. ತಟಕ್ಕನೆ ರಾಖಿ ಜವಾಬು ಕೊಟ್ಟಳು "ನಾನು ಛಲವಾದಿ. ನನಗೆ ಸಾಧನೆ ಮುಖ್ಯ. ನನ್ನ ಪ್ರತಿಭೆಯ ಸಾರ್ಥಕ್ಯ ಮಾಡುವುದು ಅಗತ್ಯ" ಎಂದಳು.

"ನೀವು ಪುರುಷ ದ್ವೇಷಿಯೆ?" ಎಂದು ಕೇಳಿದಾಗ ನಗುತ್ತಾ

"ಗಂಡು ತಾನು ಹೆಂಗಸಿಗಾಗಿ ಏನು ಮಾಡುತ್ತೇನೆಂದು ಹೆಮ್ಮೆಪಡುತ್ತಾನೆಯೋ ಅದನ್ನು ನಾನೂ ಮಾಡಬಲ್ಲೆ. ಸ್ವತಂತ್ರವಾಗಿ ಬಾಳಬಲ್ಲೆ. ಸ್ವಾವಲಂಬಿಯಾಗಿ ಬಾಳುವುದರಲ್ಲಿ ನನಗೆ ಆನಂದವಿದೆ."

ಪರಸ್ಪರ ವಿರೋಧಾಭಾಸಗಳ ಹೇಳಿಕೆ ಕೊಡುತ್ತಿರುವ ರಾಖಿ ಅಂಥ ಸಂದಿಗ್ಧಗಳಿಂದ ತಪ್ಪಿಸಿಕೊಳ್ಳುವುದಕ್ಕಾಗಿಯೇ ಬಾಯಿ ತೆರೆಯದೆ ಇರುವುದು. ಆಕೆ ಬಾಯಿ ತೆರೆದರೂ ಅಪಾಯ. ಮುಚ್ಚಿದರೂ ಅಪಾಯ. ಆಕೆ ನಟಿಸುತ್ತಲೆ ಇರುವುದನ್ನು ನೋಡುವುದು ಮಾತ್ರ ಆಪ್ಯಾಯಮಾನ.

ಫೋಟೋ : ಸಂತೋಷ      ಲೇಖನ : ದುರ್ಗಾದಾಸ

ವಿಭಿನ್ನ ರೀತಿಯ ಪಾತ್ರದಲ್ಲಿ ರಾಖಿ.



# ತೆರೆಯ ಸನಿಹ.

1 ನಮ್‌ಕೀನ್ : ವಹೀದಾ ರೆಹಮಾನ್
2 ಪುಕಾರ್ : ಜೀನತ್, ಅಮಿತಾಭ್
3 ಬಾಜಾರ್ : ಸ್ಮಿತಾ ಪಾಟೀಲ್
4 ಹಕ್‌ದಾರ್ : ಕಲ್ಪನಾ ಅಯ್ಯರ್
5 ಲೋಗ್ ಕ್ಯಾ ಕಹೇಂಗೆ : ಜಯಶ್ರೀ ಟಿ.
6 ಆದತ್ ಸೆ ಮಜಬೂರ್ : ರಾಮೇಶ್ವರಿ, ಮದನ್ ಪುರಿ, ಅಮರೀಶ್‌ಪುರಿ, ಮಿಥುನ್
7 ಜವಾಬ್ : ರಾಜ್ ಬಬ್ಬರ್, ಸ್ಮಿತಾ ಪಾಟೀಲ್
8 ಜಾನ್ ಸೆ ಪ್ಯಾರಾ : ಪ್ರಕಾಶ್ ಗಿಲ್

# ಕಲ್ಕತ್ತಾ ಮಹಾನಗರಿಯಲ್ಲಿ ಫಿಲ್ಮೋತ್ಸವ '82

ಮುಷ್ಕರ, ಪ್ರತಿಭಟನೆ, ಪ್ರದರ್ಶನ, ಮೆರವಣಿಗೆಗಳಲ್ಲಿ ಎಲ್ಲ ನಗರಗಳನ್ನೂ ಮೀರಿಸುತ್ತದೆ ಕಲ್ಕತ್ತಾ ನಗರ. 1982ರ ಫಿಲ್ಮೋತ್ಸವವನ್ನು ಇಂಥ ಸ್ಥಳದಲ್ಲಿ ಏರ್ಪಡಿಸಿದವರ ಸಾಹಸವನ್ನು ಮೆಚ್ಚಬೇಕು.

ಸಾಲದ್ದಕ್ಕೆ ಜನವರಿ ಮೂರರಂದು ಉತ್ಸವವು ಪ್ರಾರಂಭವಾಗುವ ಹೊತ್ತಿಗೆ ಮಾರ್ಕ್ಸಿಸ್ಟರ ಬೃಹತ್ ರ್‍ಯಾಲಿ, ನಾಲ್ಕನೇ ಕ್ರಿಕೆಟ್ ಟೆಸ್ಟ್ ಮ್ಯಾಚ್ ಮೊದಲಾದವುಗಳೂ ಸನ್ನಿಹಿತವಾಗಿದ್ದವು. ಆದರೆ ಕಲ್ಕತ್ತಾ ಬಲ್ಲವರಿಗೆ ಇಂಥದೆಲ್ಲ ವಿಶೇಷವೆನಿಸುವುದಿಲ್ಲ. ಚಿತ್ರಮಂದಿರಗಳ ನೌಕರರೇ ಮುಷ್ಕರ ಹೂಡುತ್ತಾರೆಂದರೂ ಉತ್ಸವ ಏರ್ಪಡಿಸಿದವರು ಜಗ್ಗಲಿಲ್ಲ.

ಭಾರತದಲ್ಲಿ ನಡೆದ ಮೂರನೆಯ ಉತ್ಸವ ಇದು. ಮೊದಲನೆಯದು 1978ರಲ್ಲಿ ಮದ್ರಾಸಿನಲ್ಲಿ ಜರಗಿತು. ಎರಡನೇದು 1980ರಲ್ಲಿ ಬೆಂಗಳೂರಿನಲ್ಲಿ. ಮೂರನೆಯದು ಕಲ್ಕತ್ತಾ ಮಹಾನಗರಿಯಲ್ಲಿ ನಡೆದುದರಲ್ಲಿಯೂ ಔಚಿತ್ಯವುಂಟು. ಪ್ರಾದೇಶಿಕ ಸಿನಿಮಾಗಳಿಗೆ ಮಹತ್ವ ಬರುವಂತಾಗಿದ್ದು, ಮೊತ್ತಮೊದಲು ಈ ನಗರದಲ್ಲಿ ನಡೆದ ಚಟುವಟಿಕೆಗಳಿಂದ. ಸತ್ಯಜಿತ್‌ರಾಯ್ ಮೃಣಾಲ್ ಸೇನ್ ಮೊದಲಾದ ಖ್ಯಾತನಾಮರ ಹೊಸ ಪ್ರಯೋಗಗಳ ಆಡುಂಬೊಲ ಕಲ್ಕತ್ತಾ. ಅಲ್ಲದೆ ಫಿಲ್ಮ್ ಸೊಸೈಟಿ ಚಳವಳಿ ಹುಟ್ಟಿಕೊಂಡು ಅದರ ಪ್ರಭಾವ ದೇಶಾದ್ಯಂತ ಪಸರಿಸಿದ್ದೂ ಇಲ್ಲಿಂದಲೇ. ಬಂಗಾಳಿ ಚಿತ್ರೋದ್ಯಮ ಈಗ ಅಂಥ ಉಚ್ಛ್ರಾಯ ಸ್ಥಿತಿಯಲ್ಲಿದ್ದರೂ ಒಂದು ಕಾಲದಲ್ಲಿ ನ್ಯೂ ಥಿಯೇಟರ್ಸ್‌ನಂತಹ ಸಂಸ್ಥೆ ಎಷ್ಟೋ ಒಳ್ಳೆಯ ಚಿತ್ರಗಳ ಕಾಣಿಕೆಯನ್ನು ರಾಷ್ಟ್ರಕ್ಕೆ ಇಲ್ಲಿಂದ ನೀಡಿದ್ದನ್ನು ಸ್ಮರಿಸಿಕೊಳ್ಳಬೇಕು.

ಈ ಸಲ ಫಿಲ್ಮೋತ್ಸವದ ಹೊಣೆಗಾರಿಕೆಯನ್ನು ಹೊತ್ತಿದ್ದು 1980ರಲ್ಲಿ ಅಸ್ತಿತ್ವಕ್ಕೆ ಬಂದ ಚಲನಚಿತ್ರ ಅಭಿವೃದ್ಧಿ ಮಂಡಲಿ. ಇದು ಆ ಸಂಸ್ಥೆ ನಡೆಸುತ್ತಿರುವ ಮೊದಲನೆ ಸ್ಪರ್ಧಾತ್ಮಕವಲ್ಲದ ಉತ್ಸವವೂ ಹೌದು.

ಅದರಲ್ಲಿಯೂ ಕಲ್ಕತ್ತಾ ನಗರದಲ್ಲಿ ಮೊದಲ ಬಾರಿಗೆ ಈ ಸಲದ ಉತ್ಸವಕ್ಕೆ ವಂಗೀಯರಿಗೆಲ್ಲ ವಂದ್ಯಳಾದ ದುರ್ಗಾಮಾತೆಯ ನೇತ್ರಯುಗ್ಮ ಹಾಗೂ ಮಂಗಳ ಲಲಾಟವೇ ಲಾಂಛನ.

ಚಿತ್ರೋತ್ಸವದಲ್ಲಿ ಭಾಗವಹಿಸಲು 144 ರಾಷ್ಟ್ರಗಳನ್ನು ಆಮಂತ್ರಿಸಲಾಗಿದ್ದರೂ ನಲವತ್ತಕ್ಕೂ ಕಡಿಮೆ ರಾಷ್ಟ್ರಗಳು ತಮ್ಮ ಒಪ್ಪಿಗೆ ಸೂಚಿಸಿದವು. ಕೆನಡಾ, ಆಸ್ಟ್ರೇಲಿಯಾಗಳು ಭಾಗವಹಿಸಲೊಪ್ಪದ್ದು ಗಮನಾರ್ಹ.

ಕಲ್ಕತ್ತಾದ ಆರೇಳು ಚಿತ್ರಮಂದಿರಗಳು ವಿದೇಶೀ ಚಿತ್ರಗಳಿಗಾಗಿ ತೆರವಾಗಿದ್ದರೆ, ಒಂದು ಆಯ್ದ ಭಾರತೀಯ ಚಿತ್ರಗಳಿಗಾಗಿ ತೆರವಾಗಿತ್ತು. ಅಪರ್ಣಾಸೇನ್ ಅವರ '36 ಚೌರಂಘಿ ಲೇನ್' ಇಂಗ್ಲಿಷ್ ಚಿತ್ರವಲ್ಲದೆ ದಕ್ಷಿಣದ ಅರವಿಂದನ್ ಅವರ 'ಪೊಕ್ಕು ವೆಯಿಲ್' ಹಾಗೂ ಎಂ. ಎಸ್. ಸತ್ಯು ಅವರ ಕನ್ನಡ 'ಬರ' ಕೂಡ ಪ್ರದರ್ಶನಗೊಳ್ಳಬೇಕಿತ್ತು. ಆದರೆ 'ಬರ'ದ ಪ್ರಿಂಟ್ ಡಿಲ್ಲಿಯಲ್ಲಿ ಉಳಿದುಹೋಗಿ ರಾದ್ಧಾಂತವಾಯಿತು. 'ಬರ' ಹಾಗೂ ಇತರ ಕೆಲವು ಚಿತ್ರಗಳ ಪ್ರದರ್ಶನ ರದ್ದುಗೊಂಡಿದ್ದಕ್ಕಾಗಿ ಕಿಕ್ಕಿರಿದ ಪ್ರೇಕ್ಷಕರು ಪ್ರತಿಭಟಿಸಿದಾಗ ಲಾಠಿ ಪ್ರಯೋಗದಿಂದ ಅವರನ್ನು ಹದಗೊಳಿಸಬೇಕಾಯಿತು.

ಕಸ್ಟಂಸ್‌ನವರ ವಿಳಂಬ ನೀತಿಯಿಂದಲೋ, ಅಚಾತುರ್ಯದಿಂದಲೋ ಚಿತ್ರ ಬರಲಿಲ್ಲ ಎಂಬ ಸಬೂಬಿನಿಂದ ಜನರು ಸಮಾಧಾನಗೊಳ್ಳಲಿಲ್ಲ. ಬೇಕೆಂದೇ ಚಿತ್ರವನ್ನು ತಡೆಹಿಡಿಯಲಾಯಿತೆಂಬ ಶಂಕೆ ಅವರಿಗೆ.

ಈ ಗೊಂದಲ ಇನ್ನೊಂದು ಮುಖ್ಯ ಸಮಸ್ಯೆಯ ಮೇಲೆ ಬೆಳಕು ಚೆಲ್ಲಿದ 'ಬರ' ಚಿತ್ರವನ್ನು ಬ್ರಸೆಲ್ಸ್ ಸಬ್‌ಟೈಟಲ್‌ಗಳಿಗಾಗಿ ಕಳುಹಿಸಬೇಕಾಗಿ ಬಂದಿದ್ದರಿಂದಲೆ ಇಷ್ಟೆಲ್ಲ ತಾಪತ್ರಯ. ಯುರೋಪಿನಿಂದ ಬಂದಮೇಲೆ ಅದು ಕಸ್ಟಂಸ್‌ನವರ ಕೈಯಲ್ಲಿ ಸಿಕ್ಕಿಹಾಕಿಕೊಳ್ಳಬೇಕಾಯಿತು. ಒಂದು ವೇಳೆ ಸಮರ್ಥವಾದ ಸಬ್ ಟೈಟಲ್ ಕೊಡುವ ವ್ಯವಸ್ಥೆ ಈ ದೇಶದಲ್ಲಿಯೇ ಇದ್ದಿದ್ದರೆ!



"ಪಮೋರಿ ತುಮ್ಹಾರಿ"ಯಲ್ಲಿ ದೇವಿಡ್, ರಾಖಿ ಇತರರು

ಜಗತ್ತಿನಲ್ಲಿಯೇ ಅತ್ಯಂತ ಹೆಚ್ಚು ಚಿತ್ರಗಳು ನಿರ್ಮಾಣಗೊಳ್ಳುವ ದೇಶವಾದರೂ, ವಿವಿಧ ಭಾಷಾ ಪ್ರದೇಶಗಳ ಚಿತ್ರಗಳಿವೆಯಾದರೂ, ಸಬ್ ಟೈಟಲ್ ವ್ಯವಸ್ಥೆಗೆ ಇಂದಿಗೂ ಬೇರೆ ದೇಶಗಳಿಗೆ ಓಡುವ ಅಧ್ವಾನವನ್ನು ಉದ್ಯಮ ಇನ್ನೂ ಉಳಿಸಿಕೊಂಡಿರುವುದು ಆಶ್ಚರ್ಯ.

ವಿದೇಶೀ ಚಿತ್ರಗಳು ಫ್ರಾನ್ಸಿನ ಖ್ಯಾತ ನಿರ್ದೇಶಕ ಗೊಡಾರ್ಡನಂಥ ಚಿತ್ರಗಳು ಇದ್ದವಾದರೂ ಉಳಿದ ಹೆಚ್ಚಿನವು ಉತ್ಸಾಹ ಹುಟ್ಟಿಸುವಂತಿರಲಿಲ್ಲ. ನೂರಕ್ಕೂ ಮಿಕ್ಕ ಚಿತ್ರಗಳಲ್ಲಿ ಗಮನ ಸೆಳೆಯುವಂಥವುಗಳು ಕೆಲವೇ ಆದರೆ ಅನಿರೀಕ್ಷಿತವಾಗಿ ಉತ್ಸವಕ್ಕೆ ಬಂದ ಟರ್ಕಿಶ್ ಕ್ರಾಂತಿಕಾರ ಇಲ್ಮಾಜ್ ಗುನೇ ಅವರ ನಾಲ್ಕು ಚಿತ್ರಗಳು ಈ ಉತ್ಸವದ ಒಂದು ವೈಶಿಷ್ಟ್ಯ. ಆತ ಸೆರೆಯಲ್ಲಿದ್ದುಕೊಂಡೇ ಗುಟ್ಟಾಗಿ ಸಲಹೆ ನೀಡಿ ನಿರ್ಮಿಸಿದ ಚಿತ್ರಗಳ ಪ್ರಿಂಟುಗಳನ್ನು ದೇಶದ ಹೊರಗೆ ಸಾಗಿಸಿದ್ದೂ ಗುಟ್ಟಾಗಿಯೇ.

ಪ್ರದರ್ಶನಗೊಂಡ ನಾನಾ ರಾಷ್ಟ್ರಗಳ ಚಿತ್ರಗಳಲ್ಲಿ ಗಂಭೀರ ಸಮಸ್ಯೆಗಳನ್ನು ಎತ್ತಿಕೊಂಡವುಗಳೂ ಇದ್ದವು. ಜುಗುಪ್ಸೆ ಹುಟ್ಟಿಸುವಂಥವುಗಳೂ ಇದ್ದವು. ಸಂತಸೋಲ್ಲಾಸ ತರುವ ಚಿತ್ರಗಳೂ ಕೆಲವಿದ್ದವು. ಆದರೆ ಲೈಂಗಿಕ ದೃಶ್ಯಗಳಲ್ಲಿ ಅತ್ಯಾಸಕ್ತಿಯುಳ್ಳವರಿಗೆ ಆಗಾಗ ನಿರಾಸೆ ಕಾದಿತ್ತು. ಏನೇನೋ ನಿರೀಕ್ಷೆಯಿಟ್ಟುಕೊಂಡು ಕ್ಯೂನಲ್ಲಿ ಹೊಡೆದಾಡಿ ಟಿಕೇಟ್ ಗಿಟ್ಟಿಸಿಕೊಂಡ ಸ್ವೀಡನಿನ ಚಿತ್ರವೊಂದರಲ್ಲಿ ಅಂಥ ಬಿಸಿ ಬಿಸಿ ಲೈಂಗಿಕತೆ ಇಲ್ಲದಾಗ ಪ್ರೇಕ್ಷಕರು ಬೇಸ್ತುಬಿದ್ದು ನಾನಾ ಸ್ವರಗಳನ್ನು ಹೊರಡಿಸಿದರಂತೆ.

ನಮ್ಮ ಫಿಲ್ಮೋತ್ಸವಗಳ ಮಾಮೂಲಿನ ಇತರ ಕೆಲವು ಲಕ್ಷಣಗಳು ಕಲ್ಕತ್ತಾದಲ್ಲಿಯೂ ಕಾಣಿಸಿಕೊಂಡವು. ಪಾಸು ನೀಡುವ ಅವ್ಯವಸ್ಥೆ, ಟಿಕೆಟ್‌ಗಳಿಗಾಗಿ ಪರದಾಟ, ಮೊದಲೇ ಪ್ರಸ್ತಾವಿಸಿದಂತೆ ಪ್ರಿಂಟ್ ತಲಪದೆ ಪ್ರೇಕ್ಷಕರಿಗೆ ನಿರಾಸೆ, ಅದಕ್ಕಾಗಿ ಪ್ರತಿಭಟನೆ, ಸಾಲದ್ದಕ್ಕೆ ರಾಜಕೀಯಸ್ಥರು ತಮ್ಮ ಹಿಂಬಾಲಕರೊಡನೆ ಒಳನುಗ್ಗಿ ತಮ್ಮ ಯಾವುದೋ ಅಸಮಾಧಾನಕ್ಕೆ ಪ್ರತೀಕವೆಂದು ಗೂಂಡಾಗಿರಿ ತೋರಿಸುವುದು – ಇವೆಲ್ಲವೂ ಇದ್ದವು.

ನಮ್ಮವರ ವಿಚಾರವಿರಲಿ. ಉತ್ಸವದಲ್ಲಿ ಭಾಗವಹಿಸಲು ಬಂದ ವಿದೇಶೀಯರಿಗೆ ಇಂಥ ವಿದ್ಯಮಾನಗಳಿಂದ ಏನು ಅನ್ನಿಸಬಹುದು? ಬರಬರುತ್ತಾ ನಮ್ಮ ಉತ್ಸವಗಳ ಕುರಿತು ಆಸಕ್ತಿ ತಾಳುವ ರಾಷ್ಟ್ರಗಳ ಸಂಖ್ಯೆ ಕಡಿಮೆಯಾಗುತ್ತಾ ಬಂದರೂ ಆಶ್ಚರ್ಯವಿಲ್ಲ.

ಆದರೆ ಬರುವವರು ಬಂದೇ ಬರುತ್ತಾರೆ ಎಂಬ ವೊಂದು ಧೈರ್ಯ ಇದ್ದೇ ಇದೆಯೆನ್ನಿ. ನಮ್ಮ ಸಿನಿಮಾ ರಂಗದ ಖ್ಯಾತನಾಮರ ಪರಿಚಯದಿಂದಲಾದರೂ ಕೆಲವರು ಬರುತ್ತಾರೆ. ಉತ್ಸವದ ಜೊತೆಗೆ ಹಮ್ಮಿಕೊಂಡ ಗೋಷ್ಠಿಗಳು ಉಪಯುಕ್ತವಾಗಿದ್ದು ಮಾಧ್ಯಮದ ಕುರಿತಾಗಿ ಅನೇಕ ವಿಷಯಗಳಲ್ಲಿ ಅಭಿಪ್ರಾಯ ಮಂಡಿಸುವ ಸದವಕಾಶವೊಂದು ಹೇಗೂ ಇದೆ. ಈ ಸಂದರ್ಭದಲ್ಲಿ ನಡೆಯುವ ಚಿಂತನ ಮಂಥನಗಳಾದರೂ ಉದ್ಯಮದ ಮುನ್ನಡೆಗೆ ಸಹಾಯಕವಾಗುವುದರಲ್ಲಿ ಸಂಶಯವಿಲ್ಲ. ಆದರೆ ಈ ಸಲ ಕಲ್ಕತ್ತಾ ಉತ್ಸವದಲ್ಲಿ ಹೇಳಿಕೊಳ್ಳುವಂಥ ವಿದೇಶೀ ಗಣ್ಯರು ಯಾರೂ ಇರಲಿಲ್ಲವೆಂದೇ ಹೇಳಬಹುದು. ಅವರ ಚಿತ್ರಗಳ ಸರಮಾಲೆಯೇ ಬಂದರೂ ವಿಖ್ಯಾತ ನಿರ್ದೇಶಕ ಗೊಡಾರ್ಡ್ ಬಂದಿರಲಿಲ್ಲ.

– ವಿಹಂಗಮ

# ಸ್ಟುಡಿಯೋ ಸುತ್ತುಗಳು

(8ನೇ ಪುಟದಿಂದ)

ಬಹುಳಷ್ಟು ಬಾರಿ ಮೌನವೇ ಉತ್ತರ. ಅಸಹಾಯಕತೆಯೆದುರು ಹರ್ಷ-ದುಮ್ಮಾನಗಳು ಬೀಗುತ್ತವೆ. ಬಡಬಡಿಸುತ್ತವೆ. ಸಜ್ಜನರು ಕಹಿಯನ್ನು ಮರೆತು ಚೆಲ್ಲಿದಲ್ಲೆಲ್ಲ ಆಯ್ದುಕೊಳ್ಳುವುದು ಮಧುರವಾದ್ದನ್ನೇ – ಅದನ್ನೇ ಕೊಡಹಿ-ಕೊಡಹಿ ಸವಿಯುವುದಂತಿರಲಿ ಇತರರಿಗೂ ಮಾಧುರ್ಯದ ಪರಿಚಯ ಮಾಡಿಸುತ್ತಾರೆ. ಅಂಥ ಅಪರೂಪದ ವ್ಯಕ್ತಿ ದಿನೇಶ್. ಎದ್ದು ಕಂಡದ್ದು, ಭಾಸವಾದದ್ದು ತನ್ನ ತಾನೇ ದಂಡಿಸಿಕೊಳ್ಳುತ್ತಾ ಇದು ಇನ್ನಿಷ್ಟೇ ಎಂಬ ತೀರ್ಮಾನಕ್ಕೆ ಬಂದು ಸ್ವಹಿತ ಮರೆತು ಇದ್ದಷ್ಟು ಕಾಲ ಒಳ್ಳಿತಿಗೆ ಒಳ್ಳೆಯವರಿಗೆ ಒಳ್ಳೆಯದೆ ಹಾರೈಸುತ್ತ – ಒಳ್ಳೆಯದ ನುಡಿಯುತ್ತ ಇದ್ದುಬಿಡುವ ಪ್ರವೃತ್ತಿ ಆತನಲ್ಲಿತ್ತು ಎಂಬುದು.

ಈ ಎಲ್ಲ ಗದ್ದಲ-ಗಲಾಟೆ-ನಗು-ಕೇಕೆಗಳ ನಡುವೆ ಆ ವರೆಗೆ ಪತ್ರಿಕೆಗಳವರಿಗೆ ಉತ್ತರಿಸುತ್ತಿದ್ದ ಶ್ರೀನಾಥ ನಾಪತ್ತೆಯಾಗಿದ್ದರು. ಎಲ್ಲಿ ಈತ ಅಂದುಕೊಂಡರೆ ಕೆಲ ನಿಮಿಷಗಳ ಮೇಲೆ ಹಾಜರ್! ಬಂದಕೂಡಲೇ ರಾತ್ರಿ ಹನ್ನೆರಡಾದ ಮೇಲೆ ಮರುದಿನದ ಲೆಕ್ಕವಾದ್ದರಿಂದ ಆತನಿಗೆ ಹುಟ್ಟು ಹಬ್ಬದ ಶುಭಾಶಯ ಹೇಳಿದೆವು. ಒಬ್ಬೊಬ್ಬರಿಗೇ ಕೈಕುಲುಕಿ ಬಂದ ಶ್ರೀನಾಥನ ಕಿವಿಯಲ್ಲಿ "ಅಯ್ಯಾ ಮಳ್ಳಿದೊರೆ ಇಷ್ಟು ಸಮಯ ಎಲ್ಲಿದ್ದೆ? ಹುಟ್ಟುಹಬ್ಬ ಹೇಗೆ ಆಚರಿಸಿದೆ? ನೋಡುವ ಅಂತ ಬಂದರೆ ಬಾಗಿಲು ಹಾಕಿದ್ದ ಹಾಗಿತ್ತು... ಲೈಟು...?" ಅಂದಾಗ ಕುಲುಕಲೊಡ್ಡಿದ ಕೈಯನ್ನು ಹಾಯ್ ಎನ್ನುವಷ್ಟು ನೋಯಿಸಿ ಹೀಗೆ ತುಂಟತನ ಮಾಡಬಹುದೇ? ನೀವು ಇಣಕೀರೆಂದೇ ಲೈಟು ಆರಿಸಿದ್ದು ಅನ್ನುತ್ತ ತುಂಟನಗೆ– ನೋಟ ಹರಿಸಿ ಮುಂದೆ ಸರಿದ ಹುಡುಗ. ಗೀತಾ ಎದ್ದು ಬರಲೇ ಇಲ್ಲ. ಬಂದಿದ್ದರೆ ಫಜೀತಿ ಮಾಡುತ್ತಾರೆಂದು ಊಹಿಸಿದ್ದರೋ!

ಪ್ರಕಾಶ್ ನಿಧಾನಿ– ಚತುರ. ಕೆಲಸ ಗೊತ್ತು. ಅನುಭವಿ. ಈವರೆಗೆ ನಾನು 96 ಚಿತ್ರಗಳಲ್ಲಿ ಅಭಿನಯಿಸಿದ್ದೇನೆ. ನಾನು ಕಂಡ ಕೆಲವೇ ಶ್ರೇಷ್ಠ ನಿರ್ದೇಶಕರಲ್ಲಿ ಪ್ರಕಾಶ್ ಸಹ ಒಬ್ಬರು ಎಂದು ಶ್ರೀನಾಥ್ ಹೇಳುವ ಮಾತಿನಲ್ಲಿ ಉತ್ಪ್ರೇಕ್ಷೆ ಇರಲಿಲ್ಲ. ನಿಜವಾದ ವಿದ್ಯೆ ಇದ್ದಲ್ಲಿ ಅಹಂಕಾರ ಹೆದರಿ ಓಡಿಹೋಗುತ್ತದಂತೆ. ಹಾಗೆ ಪ್ರಕಾಶರು "ನನಗೇನೂ ಗೊತ್ತಿಲ್ಲ. ಮೊದಲ ಸಲ ನಿರ್ದೇಶನ– ಇವರೆಲ್ಲರ ಸಹಕಾರದಿಂದ ಧೈರ್ಯ ಬಂದಿದೆ. ಎರಡೂ ಕೆಲಸ ತೊಂದರೆ ಅನ್ನಿಸಿಲ್ಲ" ಅಂದರು ನಿಧಾನವಾಗಿ. ತುಸು ದೂರದಲ್ಲಿ ಕೂತು ಮುಗುಳ್ನಗುತ್ತಿದ್ದ ಪ್ರಭಾಕರನನ್ನು ಕಂಡ ಪತ್ರಕರ್ತ ಗೆಳೆಯ ಅನಂತರಾಂ 'ನಿಮ್ಮನ್ನ ಕಂಡರೆ ಭಯ' ಅಂದರು – "ಚಿತ್ರ ಬಿಟ್ಟರೆ ಹೀಗೆ ನೋಡ್ತಿರೋದು ಇದೇ ಮೊದಲು" ಅಂದರು. "ಛೆ... ಛೆ... ಹಾಗನ್ನಬೇಡಿ ಮಹಾರಾಯರೆ – ಮಗುವಿನಂಥ ಮನಸ್ಸು – ಕೆಲಸದಲ್ಲಿ ಶ್ರದ್ಧೆ - ಸ್ನೇಹಕ್ಕೆ ಜೀವ ಕೊಡುವ ಭಾವುಕ – ಆಳು ಕಾಣುವ ಹಾಗೇ ಮನಸ್ಸೂ ಅಲ್ಲ" ಅಂತ ಪ್ರಭಾಕರ್ ಪರಿಚಯ ಮಾಡಿದ್ದೆ ನಾನು ಕಂಡಂತೆ. ಹೌದು ನೋಡಿ ಸಾಮಾನ್ಯವಾಗಿ ಸೊಣಕಲು-ಸೊಟ್ಟಲು ಆಗಿದ್ದುಕೊಂಡು ಏನೇನೊ ರೀತಿ ಕಾಣುವ ಜನ – ಮೇಲ್ನೋಟಕ್ಕೆ ಗಂಭೀರವೋ – ವಿನಯವೋ ತೋರುವ ಜನ ಬಹುಳಷ್ಟು ಸಲ ಮಹಾ ಕಿರಾತಕರು – ದುಷ್ಟ ಕೆಲಸದಲ್ಲಿ ನಿರತರೂ ಆಗಿರುತ್ತಾರೆ. ಆಳು ನೋಡಿ ಬೆಲೆ ಕಟ್ಟುವುದು ಬಹಳ ತಪ್ಪಾಗುತ್ತದೆ ಎನ್ನಿಸಿತು. ಇದೂ ಒಂದು ಚರ್ಚೆಯ ವಸ್ತುವೇ ನಮಗೆ.

ಈಚೆಗೆ ಚಿತ್ರರಂಗದಲ್ಲಿ ವಿಚಿತ್ರ ರೀತಿಯ ಗದ್ದಲ – ಅಸೂಯೆ – ಕೆಟ್ಟ ರೀತಿಯ ಪ್ರತಿಕ್ರಿಯೆಗಳು ಇವೆಲ್ಲ ಕಾಣುತ್ತವೆ. ಇದನ್ನು ಸರಿಪಡಿಸಿ ಚಿತ್ರೋದ್ದಿಮೆಯ ಉನ್ನತಿಗೆ ದಾರಿ ಮಾಡಲು ಪತ್ರಕರ್ತರೂ ಶ್ರಮಿಸಬೇಕಿದೆ. ಇದಕ್ಕೊಂದು ಸರಿಯಾದ ಯೋಜನೆ ಬೇಕು – ಚರ್ಚಿಸಬೇಕು ಅಂತೆಲ್ಲ ಬಡಬಡಿಸುತ್ತಿದ್ದರು ರಾಮನ್. ಹಲವರಿಗೆ ಅದು ಸರಿ ಎನ್ನಿಸಿದರೂ ಅವವರರ ಜಾಲಿ ಮೂಡ್ ಅದಕ್ಕೆ ಸಿದ್ಧವಿರಲಿಲ್ಲ. ಸಮಯ ಸಿಗಲೇ ಇಲ್ಲ ರಾಮನ್ ಅವರಿಗೆ. ನಮಗೆ ನೀವು ಪತ್ರಕರ್ತೆಯಲ್ಲ. ಬಂಧು ಇದ್ದ ಹಾಗೆ; ನಿಮ್ಮ ಕೈಯಾರೆ ಊಟ ಬಡಿಸಿರಿ – ನನಗೆ ಯಶಸ್ಸಿರುತ್ತೆ ಅನ್ನುತ್ತ ಶಿವಾಜಿರಾವ್ ಊಟಕ್ಕೆ ಬಡಿಸಿಕೊಂಡರೆ – ನಾನು ನಿಮಗೆ ಊಟ ಕೊಡ್ತೀನೀಂತ ಸೋಮು ಮುಂದೆ ಬಂದರು. ಐಸ್‌ಕ್ರೀಂ ತಿನ್ನುವಾಗ ಸನಿಹದಲ್ಲೇ ಇದ್ದ ಪ್ರಭಾಕರ್‌ಗೆ ಚುಡಾಯಿಸಿದೆ 'ಶಿಕಾರಿ' ನೆನಪಿಸಿ. ಪ್ರಭಾಕರ್ ಈಗ ಬಹಳ ಬೆಳೆದಿರಿ. ಹಿಂದೆಂದೊ ನಿಮ್ಮ ಸಂದರ್ಶನ ಮಾಡಿದ್ದ ದಿನಕ್ಕೂ ಇಂದಿಗೂ ಬಹಳ ವ್ಯತ್ಯಾಸ ಇದೆ – ಈಗ ನಿಮ್ಮ ಸಂಭಾವನೆ ಎಷ್ಟು ಎಂದೆ. ತಡಬಡಿಸಿದರು. ಬರೆಯೋಲ್ಲ ಅಂದಾಗ ಇಲ್ಲಿ ಬೇಡ ನಿಮಗೆ ಮಾತ್ರ ಪ್ರತ್ಯೇಕವಾಗಿ ನಿಜವಾದ್ದು ಹೇಳ್ತೀನಿ ಅಂದರು. ಬೀರು ಬಾಟಲಿಗಳ ನಡುವೆಯೂ ಪ್ರಭಾಕರ್ ಜೋಲಿ ತಪ್ಪಿರಲಿಲ್ಲ. ಸಹಾಯಕರ ತಂಡದಲ್ಲಿ ಒಬ್ಬಾತ ಶಬ್ದ ಇತ್ಯಾದಿಯಿಂದಾಗಿ ಹೆಚ್ಚು ಗಮನ ಸೆಳೆದ – ಆತ ಪ್ರಕಾಶ್‌ಗೆ ಸಹಾಯಕನಂತೆ. ತಕ್ಷಣಕ್ಕೆ ಸಾಹಸಿ ವಿಜಯ್ ರೀತಿ ಕಾಣುತ್ತಾನೆ. ಚಟುವಟಿಕೆಯಿಂದ ಓಡಾಡುತ್ತಿದ್ದ. ಪ್ರಕಾಶ್‌ಗೆ ಒಳ್ಳೆಯ ಸಹಾಯಕ ಅನ್ನಿಸಿತ್ತು.

ಉಡುಪಿ ತಲುಪಿದ ಮೊದಲ ದಿನವೇ ರೂಮುಗಳ ಗದ್ದಲದಲ್ಲಿ ನನ್ನ ರೇಗಾಟಕ್ಕೆ ಎದುರಿಗಿದ್ದ ದಶರಥರಾವ್ ಕ್ರಮೇಣ ಹೊಂದಿಕೊಂಡರು. ನೂರೂ ತೊಂದರೆ – ಎಲ್ಲಕ್ಕೂ ಆತನೇ ಉತ್ತರಿಸಬೇಕು – ಒಂದಿಷ್ಟು ಏರುಪೇರಾದರೂ ಆಕ್ಷೇಪ. ಮೊದಲ ನೋಟಕ್ಕೆ ಭಾರ್ಗವನ ಹಾಗೇ ಕಾಣುವ ದಶರಥರಾವ್ ಒಳ್ಳೆಯ ನಿರ್ವಾಹಕ. ಮಲ್ಪೆಯಲ್ಲಿ ಭೆಟ್ಟಿಯಾಗಿ 'ಅಕ್ಕಾ ನಾನಿಲ್ಲೇ ಇದ್ದೀನಿ' ಅನ್ನುತ್ತ ಹಿಂದೆ ಮುಂದೆ ಅಡ್ಡಾಡಿ ಪ್ರೀತಿಯ ಮಾತಾಡಿದ ಕಿಶೋರ ಲೋಕೇಶ್, ತನ್ನ ತಾಪತ್ರಯ ಹೇಳಿಕೊಂಡ. ಬಾಯಾರಿದಾಗ ನೀರು ಹನಿಸಿದ ಎಳೆಯ ಮಿತ್ರ. ಇಂಥ ಎಷ್ಟೋ ತರುಣರು ಬೆಳೆಯಲು ಅವಕಾಶಗಳು ಸಿಗುವುದೆಂದೊ? ಲೋಕೇಶನ ಓಡಾಟ, ತೋರಿದ ಪ್ರೀತಿ, ಅರಳು ಹುರಿದಂಥ ಮಾತು ಪಾದರಸವನ್ನು ನೆನಪಿಗೆ ತರುತ್ತಿತ್ತು.

ಅನ್ಯ ಭಾಷೆಯಿಂದ ಆಮದಾದ ಹುಡುಗಿಯರಲ್ಲಿ ಅಂಬಿಕಾ ಪರವಾಗಿಲ್ಲ. ಕೊಂಚ ನೋಡಬಹುದಾದ ಪರ್ಸನಾಲಿಟಿ ಅನ್ನಿಸಿತ್ತು. ಅಲ್ಲಲ್ಲಿ ಸುತ್ತಾಡುತ್ತಿದ್ದ ಎಕ್ಸ್‌ಟ್ರಾ ಹುಡುಗಿಯರೇ ಕೆಲವರು ಸುಂದರವಾಗಿದ್ದಾರೆನ್ನಿಸಿತ್ತು. ಈ ಹುಡುಗಿಯರೆಲ್ಲ ಬಿಡಿಬಿಡಿಯಾಗಿ ಮಂದೆಯಿಂದ ಹೊರಗಾದ ಕುರಿಗಳ ಹಾಗೆ ಹಿಡಿಯಾಗಿ ಕೂತಿದ್ದರು. ಕುತೂಹಲವೆನ್ನಿಸಿತ್ತು ಅವರನ್ನ ಕಂಡಾಗ – ಚಿತ್ರೀಕರಣಗೊಂಡ ಭಾಗವೇನಂಥ ಮುಖ್ಯವಾದ್ದಲ್ಲ – ನಾವಿದ್ದಾಗಿನ ಯಾವ ದೃಶ್ಯವೂ ಅಂಥ ಗಟ್ಟಿಯದಿರಲಿಲ್ಲ.

ಶಶಿಕಲಾ ಕೆಲಸ ಮುಗಿಯುತ್ತ ಬಂದಿತ್ತು. ಹೊರಡಬೇಕಿತ್ತು – ದಿನೇಶ್‌ರನ್ನ 'ಅಂಕಲ್' ಅಂದು ರೇಗಿಸಿದ್ದರು. ಆಗಸದಲ್ಲಿ ಹಾರುವ ರಣಹದ್ದನ್ನು ತೋರಿಸಿ 'ಗರುಡ' ಅನ್ನುತ್ತಿದ್ದ ದಿನೇಶರಿಗೆ ರೂಪತಾರಾದ ಗುರುರಾಜ್ ಗರುಡ ಅನ್ನೋಕೆ ನಾಲಿಗೆ ತಿರುಗದೋರು ಗ ಬದಲು ತಪ್ಪಕ್ಷರ ಬಳಸಿ ಅಪಾರ್ಥ ಆದೀತೆಂತ ಹದ್ದು ಅಂತಾರೆ ಅಂತ ವ್ಯಾಖ್ಯಾನಿಸಿ ನಗೆಬುಗ್ಗೆಗೆ ದಾರಿಯಾದರು.

ಮಲ್ಲಿಕಾ– ದಯಾನಾಗಳು; ಶ್ರೀನಾಥರ ಸಾಮಯಿಕ ಉತ್ತರಗಳಿದ್ದ ಚರ್ಚೆ – ಎಲ್ಲ ಹಸಿರಾದ ನೆನಪು – ನಿರ್ಮಾಪಕರ ಸಲಹೆಯಂತೆ ಮೂಕಾಂಬಿಕೆಯ ದರ್ಶನ ಒಂದು ಐತಿಹಾಸಿಕ ಸ್ಥಳವೆಂದಾದರೂ ನೋಡಲು ಅಪೇಕ್ಷಿಸುವ ನಮಗೆ ಅಲ್ಲಿ ಏನಂಥ ವೈಶಿಷ್ಟ್ಯ ಕಾಣಲಿಲ್ಲ. ಇರುವದನ್ನೆಲ್ಲ ವಿಚಿತ್ರ ನಿಯಮಗಳ ಆಚರಣೆಗಳು ಏನೆಲ್ಲ ಪ್ರವೇಶಿಸಿ ಕುರೂಪಗೊಳಿಸಿರುತ್ತವೆ. ಇಷ್ಟಕ್ಕೆ ಇಲ್ಲಿಗೇಕೆ ಬರುತ್ತಾರೆ ಅನ್ನಿಸಿದ್ದರೆ – ಅಲ್ಲಿಯ ಅಧಿಕಾರಿ ಎಂ.ಜಿ.ಆರ್.ಬಂದದ್ದು. ಯಾರ್ಯಾರೊಬಂದದ್ದು ಅಂದೇ ಬರಲಿರುವ ಮಂತ್ರಿಗಳ ಕುರಿತು ಹೇಳುತ್ತಿದ್ದಂತೆ ಮಂತ್ರಿಗಳೇ ಬಂದುಬಿಟ್ಟರು–ಅವರೆಲ್ಲ ಸಡಗರಿಸಿ ವಲ್ಲಿ ಹೊದ್ದು ಹೊರಟರೆ ನಾವು ಊಟದ ಮನೆಗೆ ಕಾಲು ಕಿತ್ತೆವು. ಗೀತಾ ಇಡೀ ದಿನದ ವಿಶೇಷ ಪೂಜೆ ಏರ್ಪಡಿಸಿದ್ದರು ಪತಿಯ ಮಗಳು ಅಮೂಲ್ಯಾಳ ಹುಟ್ಟಿದ ಹಬ್ಬಕ್ಕಾಗಿ. ಗೀತಾ ಇದ್ದಲ್ಲಿ ನಗೆ - ವ್ಯಂಗ್ಯ. ಎಲ್ಲರನ್ನೂ ಡಾಮಿನೇಟ್ ಮಾಡುವ ಗೀತಾ ಗ್ರೂಪ್ ಫೋಟೋದಲ್ಲಿ ಹಟಮಾಡಿ ನಿಂತರು – ಅದೂ ನನ್ನ ಜೊತೆ ನಿಲ್ತಿದೀ ಗೀತಾ – ನಾನು ಫೋಟೋದಲ್ಲಿ ಬೀಳದ ಹಾಗೆ ಅಂದರೆ ಇನ್ನಷ್ಟು ಬಾಯಿಮಾಡಿ 'ಕಲಾಪ'ದ ಬಗ್ಗೆ ಗದ್ದಲವೆಬ್ಬಿಸಿ ಅಂತೂ ಜೊತೇಲೇ ನಿಂತು ಫೋಟೋ ತೆಗೆಸಿಕೊಂಡರು ಹುಡುಗಿ.



ಜ್ಯೋತಿ : ರೂಪಾ ಚಕ್ರವರ್ತಿ

ಸುಧೀಂದ್ರರ ಸ್ನೇಹ ಪ್ರೀತಿ ಏರ್ಪಾಟಿನ ಅಚ್ಚುಕಟ್ಟಿನ

ಪ್ರಯಾಣ ಹಿತವಿತ್ತು. ಬರೆದಷ್ಟೂ ಗಾತ್ರ ಹೆಚ್ಚುವ ಉಡುಪಿಯ ಪ್ರಯಾಣ ಅನುಭವ ಇಲ್ಲಿಗೆ ಸಾಕು.

ಬೆಂಗಳೂರಿಗೆ ಬಂದರೆ ಮಧು ಕರೆದೊಯ್ದುದ್ದು ವಿಜಯ ಗುಜ್ಜಾರರ ಚಿತ್ರೀಕರಣಕ್ಕೆ – ಆದವಾನಿ ಲಕ್ಷ್ಮೀದೇವಿಯರ ಮಗಳು ರೂಪಾ ಮತ್ತೆ ಕನ್ನಡದಲ್ಲಿ. ನಡೆನುಡಿಯಲ್ಲಿ ಸಜ್ಜನೆ ರೂಪಾ. ಭವಿಷ್ಯ ಒಳ್ಳೆಯದಾಗಲಿ ಎಂದಷ್ಟೇ ಹರಸಬೇಕು. ಕನ್ನಡದ ರಸಿಕರ ಕೈಲಿದೆ – ಕಿರಿದಾದ ಮನೆಯಲ್ಲಿ ಚಿತ್ರೀಕರಣ ಕೊಂಚ ಕಷ್ಟ. ವೀಕ್ಷಣೆಗೆ ನಾವು ಒಳಸರಿದಾಗ ಹೊರಟವರು ಸಪ್ನ, ಪರಿಚಯ ಆಗಲಿಲ್ಲ "ಇರಲಿ ಬಿಡಿ ಕನ್ನಡೇತರರ ಬಗ್ಗೆ ನಾವೇನಷ್ಟು ಕಾತರರಿಲ್ಲ. ಎಂದಾದರೂ ಆದೀತು – ಊರಿಗೆ ಬಂದವರು ನೀರಿಗೆ..." ಅಂದೆವು. ಇಲ್ಲಿ ಮತ್ತೆ ದಿನೇಶರೊಟ್ಟಿಗೆ ಹರಟೆ - ನಗು - ಗುಜ್ಜಾರ್ ಕತೆ ಹೇಳಿದರು. ಪತ್ರಕರ್ತರೊಬ್ಬರು ನಿರ್ಮಾಪಕರು – ಕತೆಯೂ ಅವರದೇ – ಅದಕ್ಕಷ್ಟು ರಕ್ತ ಮಾಂಸ ತುಂಬಿದ್ದಾರೆ ಗುಜ್ಜಾರ್. ಅನೇಕ ಚಿತ್ರಗಳಿಗೆ ಸಹಾಯಕರಾಗಿದ್ದವರು. ಚಿತ್ರಕ್ಕೆ 'ಧರ್ಮ' ಎಂದು ಹೆಸರಿಡಲಾಗಿದೆ. ಪ್ರೇಮ ವಿವಾಹ – ವಿರಸ – ವಿಚ್ಛೇದದ ಹಂತಗಳು. ಇವೇ ವಿವರಗಳಿರುವ ಕತೆ ಅಂತಿಮವಾಗಿ ನಿರ್ದೇಶಕರ ನಿಲುವು ಏನೋ! ಲಾಯರ್ ಗೆಳತಿಯಾಗಿ ಜಯಂತಿ; ಕಾರು ಹೋಗಿದ್ದು ತಡ (ಟಿ.ಬಿ.ಗಳಲ್ಲಿ ಕಾಂಗ್ರೆಸ್ ಸಮಾರಂಭದಲ್ಲಿ ರಾಜೀವರನ್ನು ಸ್ವಾಗತಿಸಲು ಇತ್ಯಾದಿ ಬಿಸಿ ಅಂತೆ. ಬಾಡಿಗೆಗೆ ಸಿಗುತ್ತಿರಲಿಲ್ಲ) ತಡವಾಗಿ ಬಂದದ್ದಕ್ಕೆ ನಮ್ಮ ಆಕ್ಷೇಪ – ಅದನ್ನ ತಗೋಳೋಕೆ ನಾನ್ ತಯಾರಿಲ್ಲ ಅಂತ ಅಬ್ಬರಿಸಿ ಹ್ಹಾ - ಹ್ಹೂ ಅಂದ ಜಯಂತಿಯನ್ನು ನೋಡಿದ ಪತ್ರಕರ್ತ ಸೀತಾರಾಂಗೆ ಹೋದ ಉಸಿರು ಬಂದಹಾಗಿತ್ತು. ಇನ್ನೂ ಜಯಂತಿ ಗ್ಲಾಮರಸ್; ಸದ್ಯ ಕಾದಿದ್ದೂ ಸಾರ್ಥಕ ಎಂಬ ಭಾವ – ಬಹಳ ವರ್ಷಗಳ ಮೇಲೆ ಈಗ ನೋಡ್ತಿದೀನಿ ಅಂತ ರಾಮನ್ ಪರಿಚಯ ಮತ್ತೆ ಮಾಡಿಕೊಂಡರು.

ಹೊರಗಿಂದ ಅವಸರ ಮುನಿಸು ತುಂಬಿಕೊಂಡು ಬಂದು ಗೆಳತಿಯನ್ನು ಕರೆಯಬೇಕು. ಹಾಗೆ ಬಂದಾಗ ಎದುರಾಗಿದ್ದ ಸೋಫಾದಲ್ಲಿ ನಾನೇ ಕೂತಿದ್ದೆ. ತಕ್ಷಣ ತುಟಿಯಲ್ಲೇ ನಗು. ಹೆಸರು ನನ್ನದೇ ಹೊರಬರುತ್ತಿದ್ದರೂ ಜಯಂತಿಯೆಂದು ಅರ್ಥವಾದರೂ ಬೇಕೆಂದೇ ಸ್ಥಳ ಬಿಡದೆ ಕೂತೆ. ಆದರೂ ಶ್ರಮದಿಂದ ಮೊದಲನೇ ಶಾಟ್ ಓ.ಕೆ. ಮಾಡಿದರು ಜಯಂತಿ ಹತ್ತಿರಬಂದು ತೊಂದರೆ ಕೊಟ್ಟೇಂತ ತರಾಟೆಗೆ ತಗೊಂಡರು ಅನ್ನಿ. ಜಯಂತಿ ಅಭಿನಯದ ಗಿರಿಬಾಬು ನಿರ್ದೇಶನದ '...ಅತ್ತಿಗೆ' ಚಿತ್ರದ ಬಗ್ಗೆ ಹರಟಿದೆವು. ಜಯಂತಿ ಎಂದಿನ ಸೌಜನ್ಯ ಸ್ನೇಹದಿಂದ ಮಾತಾಡಿದರು. 'ಇವರು ನಿಮಗೆ ಇನ್ನೂ ಮಿತ್ರರೊ' ಅಂತ ಇತರರು ಚುಡಾಯಿಸಿದರು.

"ಸದ್ಯಕ್ಕಂತೂ ಮಿತ್ರರು ಪತ್ರಕರ್ತರಿಗೆ ಈ ಮಿತ್ರರೂ ಎಷ್ಟು ಶಾಶ್ವತ ಅಂತ ಹೇಳೋಕಾಗಲ್ಲ. ನಮ್ಮ ಅಂಕಣಗಳು ಮಿತ್ರ - ಶತ್ರು ಗದ್ದಲ್ಲದಲ್ಲಿ ಏನೇನೊ ಆಗಿಬಿಡುತ್ತವೆ" ಅಂದೆ.

'ಇಲ್ಲ – ಇಲ್ಲ – ವಿಜಯಾ ನನಗೆ ಒಳ್ಳೇ ಫ್ರೆಂಡ್ – ಹಾಗೆಲ್ಲ ಹೇಳ್ಬೇಡಿ' ಅಂದರು ಜಯಂತಿ. ಈ ಮಾತೇ ಬಹಳ ಜನ ಹೇಳಿದರೂ – ಮತ್ತೆ ದೂರಿದೋರಿದಾರೆ.

ನೀವೇನೇ ಬರೆದ್ರೂ – ಅಂದ್ರೂ ನಾನು ಫ್ರೆಂಡ್ ಅಂದ ಜಯಂತಿಯ ಮಾತು ಕಾಲಕ್ಕೂ ಉಳಿಸಿಕೊಳ್ಳುವಪಂತಾಗಲಿ.

●

# ಕಿರುಚಿತ್ರಗಳಿಗೆ ಚಿತ್ರಕತೆ

(33ನೇ ಪುಟದಿಂದ)

ಕಹಿ ಔಷಧವೂ ಅಕ್ಕರೆಯೆ' ಎಂಬ ಮಕ್ಕಳ ಪದ್ಯವನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು.

ಯಶಸ್ವಿ ಚಿತ್ರ ತಯಾರಿಕೆಗೆ ಸೂತ್ರಗಳಿಲ್ಲ. ಇದು ಕಾಲಕಾಲಕ್ಕೆ ಬದಲಾಗುವ ಪ್ರವೃತ್ತಿ. ವಿದ್ಯಮಾನಗಳನ್ನು ಗಮನಿಸುವ ಅವುಗಳನ್ನು ಉಪಯೋಗಿಸುವ ಬುದ್ಧಿವಂತಿಕೆಯನ್ನು ಅವಲಂಬಿಸಿರುತ್ತದೆ. ಪ್ರೇಕ್ಷಕನ ಒಡಲಾಳವನ್ನು ಮಹಾನ್ ನಗರಿಯ ಹವಾ ನಿಯಂತ್ರಿತ ಕೊಠಡಿಯಲ್ಲಿ ಕುಳಿತು ಕಲ್ಪಿಸುವುದು ಸಾಧ್ಯವಿಲ್ಲ. ಆ ವಸ್ತು ಕುರಿತಂತೆ ನಡೆಸುವ ಸಂಶೋಧನೆ – ಅದಕ್ಕಾಗಿ ಅವನು ಪಡುವ ಸಾಹಸ ಮುಖ್ಯ. 'ಸ್ಥಿತಪ್ರಜ್ಞ' ಎಂದೂ ಕತೆಗಾರನಾಗುವುದಿಲ್ಲ. ಅದು 'ಸ್ಥಿತಿಪ್ರಜ್ಞ'ನ ಕೆಲಸ.

## ಕೆಲವು ಸಲಹೆಗಳು

ಸಂಶೋಧನೆಗೆ ಹೆಚ್ಚಿನ ಸಮಯ ಮೀಸಲಿಡಿ. ಬರಿಯ ಗ್ರಂಥಾಲಯವಲ್ಲ – ಸ್ಥಳೀಯರನ್ನು ಭೇಟಿಮಾಡಿ – ಆಡುವ, ನೋಡುವ ವಿಷಯಗಳನ್ನು ಟಿಪ್ಪಣಿ ಮಾಡಿಕೊಳ್ಳಿ. ಇಂಥ ಟಿಪ್ಪಣಿ ಇಂದಲ್ಲದಿದ್ದರೆ ಇನ್ನೊಮ್ಮೆ ಉಪಯುಕ್ತವಾದೀತು. ಬೇಕೆನಿಸಿದಲ್ಲಿ ಚಿತ್ರಗಳನ್ನು ಬಿಡಿಸಿಕೊಳ್ಳಿ – ಚಿತ್ರ ಬರೆಯಲು ಬಾರದಿದ್ದರೆ ಕಲಿಯುವ ಪ್ರಯತ್ನ ಮಾಡಿ. ಇವು ಚಿತ್ರ ನಿರ್ಮಾಣದ ವಿವಿಧ ಹಂತಗಳಲ್ಲಿ ಉಪಯುಕ್ತ. ಉದಾಹರಣೆಗೆ ಛಾಯಾಗ್ರಹಣ, ವಸ್ತ್ರಾಲಂಕಾರ, ಪ್ರಸಾಧನ ಮುಂತಾದವು.

ಪ್ರೇಕ್ಷಕನನ್ನು ಕುರಿತಂತೆ ಸಾಧ್ಯವಾದಷ್ಟು ತಿಳಿಯಿರಿ. ಅವನಿಗೆ ತಕ್ಕಂತೆ ಚಿತ್ರ ತಯಾರಿಸುವ ಪ್ರಯತ್ನ ಮಾಡಿ. ಅವನ – ನಿಮ್ಮ ನಾಡಿ ಬಡಿತವನ್ನು ಹೊಂದಿಸಿಕೊಳ್ಳಿ.

ಚಿತ್ರದ ವಸ್ತು ಕುರಿತಂತೆ ವಿಶಾಲ ಹೃದಯಿಗಳಾಗಿ, ಒಂದು ತರ್ಕಬದ್ಧ ಚಿತ್ರ ತಯಾರಿಸಿ, ಚಿತ್ರವನ್ನು ಸಾಧ್ಯವಾದಷ್ಟು ಕಥನಕ ಮಾಡುವ ಪ್ರಯತ್ನ ಮಾಡಿ. ಚಿತ್ರ ನೋಡುವ ಜನ ಬೇರೆ ಜನಗಳನ್ನು – ಅವರು ಬದುಕನ್ನು ಅನುಭವಿಸುವ ರೀತಿಯನ್ನು ಕುರಿತಂತೆ ಕುತೂಹಲ ಬೆಳೆಸಿಕೊಂಡಿರುತ್ತಾರೆ, ಆದ್ದರಿಂದ ಬೇರೆಯವರ ಜನಜೀವನವನ್ನು ಸಹಜವಾಗಿ ಪ್ರತಿಬಿಂಬಿಸುವ ಪ್ರಯತ್ನ ನಡೆಸಿ. ಸಂಭಾಷಣೆ – ವಿವರಣೆಗಳು ಸರಳವಾಗಿರಲಿ. ಅವನ ಕಣ್ಣುಗಳ ಕೆಲಸವೇ ಹೆಚ್ಚಿರುವುದರಿಂದ ಅವುಗಳ ಜ್ಞಾಪಕಶಕ್ತಿ ಕಿವಿಯೊಂದಿಗೆ ಹೊಂದಿಕೊಂಡೀತೆಂಬ ಖಚಿತ ಅಭಿಪ್ರಾಯವಿಲ್ಲ. ಆದ್ದರಿಂದ ಸುಲಭಗ್ರಾಹಿಯಾದ ಶಬ್ದಗಳು ಉಳಿದುಕೊಳ್ಳುತ್ತವೆ, ಅವನ ಮನದಲ್ಲಿ.

## ಕೊನೆಯ ಮಾತು

ಈ ಎಲ್ಲ ಮಾತುಗಳು ಒಂದು ಹಂತಕ್ಕೆ ಬಂದು ನಿಲ್ಲುತ್ತವೆ. ಅದು ಚಿತ್ರಕಥಾ ಲೇಖಕನ ಕ್ರಿಯಾಶೀಲತೆ. ಅವನು ಎಷ್ಟೋ ದಿನಗಳು ಯೋಚಿಸಿ, ನಿರ್ಧರಿಸಿ, ಚಿತ್ರ ತಯಾರಿಸಿ ಚಿತ್ರ ನೋಡಿದ ನಂತರ 'ಇನ್ನೂ ಸಾಲದು' ಎನಿಸುತ್ತದೆ. ಚಿತ್ರದ ಸಾಧ್ಯಾಸಾಧ್ಯತೆಗಳನ್ನು ಅರಿಯುವ ಅನುಭವ ದೊರಕಿಸಿಕೊಳ್ಳಿ.

ಚಿತ್ರ ಒಂದು ಅಪೂರ್ವ ಮಾಧ್ಯಮ. ಇದು ಇಂಥದೇ ಎಂದು ಅರ್ಥೈಸ ಹೊರಟವರ ಅರ್ಥಗಳು ಅಪೂರ್ಣವಾಗಿವೆ. ಚಲನ ಚಿತ್ರದ ಶಕ್ತಿಯೇ ಬೇರೆ. ಅದು ಪ್ರೇಕ್ಷಕನ ಮೇಲೆ ಬೀರುವ ಪರಿಣಾಮ, ತಲುಪಿಸುವ ವಿಷಯ, ಮನರಂಜನೆ ಮುಂತಾದವು ಅಸಾಧಾರಣ. ಈ ಅಸಾಧಾರಣತೆಯ ಮಟ್ಟವನ್ನು ಒಂದು ಚಿತ್ರ ಮುಟ್ಟಲು ಮೂಲ ಕಾರಣಕರ್ತ ಚಿತ್ರಕಥಾ ಲೇಖಕ. ಚಿತ್ರ ತನ್ನ ಕನಸಿನ ಗುರಿ ತಲುಪುವಲ್ಲಿ ಅವನು ತಯಾರಿಸುವ ಸಿನಿಮೀಯ ಕಥೆ ಮುಖ್ಯವಾಗುತ್ತದೆ.

ಇವುಗಳು ಅನುಭವದಿಂದ ಬರುವಂಥವು. ಇವುಗಳನ್ನು ತಿಳಿಯಲು ಪ್ರಯೋಗಿಸಿ. ನೀವು ಕಲಿಯುವಾಗ ಏನನ್ನು ಮಾಡಬಾರದು ಎಂಬುದನ್ನು ಮೊದಲು ಕಲಿಯಿರಿ. ನಿಮ್ಮ ಅನುಭವವನ್ನು ಗಟ್ಟಿಮಾಡಿಕೊಳ್ಳಿ. ನೀವೂ ಕೂಡ ಒಳ್ಳೆಯ ಚಿತ್ರಕಥಾ ಲೇಖಕರಾಗುತ್ತೀರಿ!

(ಮುಗಿಯಿತು)



"ಮುಳ್ಳಿನ ಗುಲಾಬಿ" ವರ್ಣಚಿತ್ರದ ಮುಹೂರ್ತದಂದು ನಿರ್ಮಾಪಕ ರಾಜಾರಾವ್, ಜೆ. ಎನ್. ಗೋಪಾಲ್, ಛಾಯಾಗ್ರಾಹಕ ಸಾಯಿಪ್ರಸಾದ್, ನಿರ್ದೇಶಕ ವಿಜಯ್, ಶ್ರೀನಾಥ ರೆಡ್ಡಿ ಮತ್ತು ಸಾಹಸ ನಿರ್ದೇಶಕ ಶಿವಯ್ಯ

# ಸ್ಪಂದನ

ಎಲ್ಲರೂ ಕುಟುಂಬ ಸಮೇತರಾಗಿ ಕುಳಿತು ನೋಡು ವಂಥ ಒಂದು ಚಿತ್ರ "ಪ್ರೀತಿಸಿ ನೋಡು". ಇತ್ತೀಚೆಗೆ ಬಂದ ಚಿತ್ರಗಳಿಗಿಂತ ಭಿನ್ನವಾದುದು. ನಿರ್ಮಾಪಕ ಎಂ. ಕೆ. ಬಾಲಾಜಿಸಿಂಗ್‌ರವರು ಗೀತಪ್ರಿಯರ ನಿರ್ದೇಶನದಲ್ಲಿ ಉತ್ತಮ ಚಿತ್ರವೊಂದನ್ನು ತೆರೆಗೇಯುವುದರಲ್ಲಿ ಯಶಸ್ವಿಯಾಗಿದ್ದಾರೆ.

ಆದರೆ ಚಿತ್ರದ ಕೊನೆಯಲ್ಲಿ ಬರುವ ಸಂದೇಶವನ್ನು ಕಾರ್ಯರೂಪಕ್ಕೆ ತರುವಲ್ಲಿ ಎಷ್ಟು ಜನರು ಸಫಲರಾಗಿದ್ದಾರೆ, ಆಗುತ್ತಾರೆ ಎನ್ನುವುದು ಮುಖ್ಯ. ಅದರಂತೆ ಅಂಗವಿಕಲರ ವರ್ಷದ ಅಂಗವಾಗಿ ಬಂದ ಚಿತ್ರವಾದರೂ ಅದು ಆ ಥೀಮ್‌ನ ಮೇಲೆ ಪರಿಣಾಮ ಬೀರುವುದರಲ್ಲಿ ವಿಫಲವಾಗಿದೆ. ಅಂಗವಿಕಲೆ ಎಂದು ಮೋಹನ್ (ವಿಷ್ಣುವರ್ಧನ್) ಮಧು (ಆರತಿ)ವನ್ನು ಪ್ರೀತಿಸಿ ಮದುವೆ ಆಗುತ್ತಾನೆ. ಅವಳ ಬಾಳಿಗೆ ನಂದಾದೀಪವಾಗುತ್ತಾನೆ, ಆಸರೆಯಾಗುತ್ತಾನೆ. (ಅವಳು ಯುವತಿಯಾದುದರಿಂದ. ಒಂದು ವೇಳೆ ಅವಳು ಚಿಕ್ಕ ಹುಡುಗಿಯೊ, ಕುರೂಪಿಯೊ ಆಗಿದ್ದಿದ್ದರೆ?)

ಮನರಂಜನೆಯ ದೃಷ್ಟಿಯಿಂದ ನೋಡಿದರೆ ಚಿತ್ರ ಎಲ್ಲಾ ರೀತಿಯಲ್ಲೂ ಉತ್ತಮ. ಅಭಿನಯದಲ್ಲಿ ಆರತಿ ಪ್ರಪ್ರಥಮ. ಆಸ್ಪತ್ರೆಯಲ್ಲಿ ಜ್ಞಾನ ಬಂದು ತನ್ನ ಕಾಲುಗಳೆಲ್ಲಿ ಎಂದು ಕೂಗುವ ದೃಶ್ಯದಲ್ಲಿಯಂತೂ ಅವರು ಅದ್ಭುತವಾಗಿ ನಟಿಸಿದ್ದಾರೆ. ವಿಷ್ಣುವರ್ಧನ್ ಪರವಾಇಲ್ಲ. ಶ್ರೀನಿವಾಸಮೂರ್ತಿ ತನಗೆ ಸಿಕ್ಕಿದ ಅವಕಾಶವನ್ನು ಸಮರ್ಪಕವಾಗಿ ಉಪಯೋಗಿಸಿಕೊಂಡಿದ್ದಾರೆ. ಈತ ಸಂಗೀತಪ್ರೇಮಿ ಪ್ರೇಕ್ಷಕರಿಂದ ಸಾಕಷ್ಟು ಚಪ್ಪಾಳೆಯನ್ನು ಗಿಟ್ಟಿಸಿಕೊಳ್ಳುತ್ತಾರೆ. ಬೇಬಿ ರೇಖ ಮತ್ತು ನವೀನ್ ಇವರಿಗೆ ಒಳ್ಳೆ ಜೊತೆಗಾರರು. ಜೈಜಗದೀಶ್‌ಗೆ ಅವಕಾಶ ಸಾಲದು. ಆದರೂ ಇದ್ದಷ್ಟು ಹೊತ್ತು ಮಿಂಚಿದ್ದಾರೆ. ಗೀತಪ್ರಿಯ ಹೊಸಬರಿಗೆ ಸಾಕಷ್ಟು ಅವಕಾಶ ಕಲ್ಪಿಸಿದ್ದಾರೆ. ವಿಜಯಗೀತ, ಸುನೀತ, ಪ್ರಶಾಂತಿ ನಾಯಕ್ ಮತ್ತು ಆಶಾಕಿರಣ್ ಉತ್ತಮ ನಟಿಯರಾಗುವ ಲಕ್ಷಣಗಳಿವೆ. ಬಿಂದು ಹೆಂಗಸರಿಂದ ಸಾಕಷ್ಟು ಬೈಗಳನ್ನು ತಿನ್ನುವುದರಲ್ಲಿ ಸಫಲರಾಗಿದ್ದಾರೆ. ಬಹುದಿನಗಳ ನಂತರ ಶಶಿಕಲಾ ಒಂದು ಉತ್ತಮ ಪಾತ್ರದಲ್ಲಿ ಕಾಣಿಸಿಕೊಂಡಿದ್ದಾರೆ.

ಕುಲಶೇಖರ್ ಛಾಯಾಗ್ರಹಣ ರಮ್ಯ. ಸಂಗೀತ ಕೇಳಲು ಇಂಪಾಗಿದೆ. ಆದರೆ ಚಿತ್ರವು ಅಂಗವಿಕಲರ ಕುರಿತು ಇನ್ನೂ ಆಳವಾಗಿ ಅಂದರೆ ಅವರ ಭಾವನೆಗಳು, ದಿನಚರಿ, ಅಲ್ಲದೆ ಇತರರಲ್ಲಿ ಅಂಗವಿಕಲರ ಬಗ್ಗೆ ಇರುವ ಭಾವನೆಗಳು, ಪ್ರೀತಿ, ಅಸಹ್ಯತೆ ಇವುಗಳನ್ನು ಕೂಲಂಕಷವಾಗಿ ಚಿತ್ರಿಸಿದ್ದರೆ ಚಿತ್ರ ಪರಿಣಾಮಕಾರಿಯಾಗುತ್ತಿತ್ತೇನೋ.

ಕುಲಶೇಖರ (ದ.ಕ.) ಅರುಣ್

• • •

ಕನ್ನಡದಲ್ಲಿ ಆಗೊಮ್ಮೆ ಈಗೊಮ್ಮೆಯಾದರೂ ಉತ್ತಮ ಚಿತ್ರ ತೆರೆಕಾಣುತ್ತಿರುವುದು ಕನ್ನಡಿಗರ ಭಾಗ್ಯ. ಇಂತಹ ಚಿತ್ರಗಳ ಸಾಲಿನಲ್ಲಿ, ಈಚಿನ ಪ್ರೀತಿಸಿ ನೋಡು ಚಿತ್ರ ಒಂದಾಗಿರುವುದು ಮೆಚ್ಚುವ ಸಂಗತಿ. ಅಂಗವಿಕಲರ ವರ್ಷದಲ್ಲಿ ಅವರಿಗಾಗಿ ಹೆಚ್ಚಿನ ಏನನ್ನೂ ಸಾಧಿಸದಿದ್ದರೂ, ವರ್ಷದಂತ್ಯದಲ್ಲಿ ಈ ಚಿತ್ರ ಬಿಡುಗಡೆಯಾಗಿರುವುದು ಹೆಮ್ಮೆಯ ವಿಷಯ. ಕನ್ನಡದ ಖ್ಯಾತ ಲೇಖಿಕಿಯೊಬ್ಬರ ಕಥೆಯನ್ನಾಧರಿಸಿ ಚಿತ್ರಿಸಿರುವ ಈ ಚಿತ್ರ ಜನ ಮೆಚ್ಚುಗೆ ಗಳಿಸುವುದರಲ್ಲಿ ಸಂಶಯವಿಲ್ಲ.

ಚಿತ್ರದಲ್ಲಿ ಅನವಶ್ಯಕ ಹೊಡೆದಾಟಗಳನ್ನು ದೂರವಿಟ್ಟುದು ಪ್ರಶಂಸಿಸಬೇಕಾದ ಅಂಶ. ಪ್ರತಿಯೊಂದು ಕ್ಷೇತ್ರದಲ್ಲೂ ಮುಂದಿದ್ದು ಉತ್ತಮ ಆಟಗಾರ್ತಿಯಾಗಿದ್ದವಳು ಆಕಸ್ಮಿಕ ಅಪಘಾತದಿಂದ ಕಾಲು ಕಳೆದುಕೊಂಡು ಅಂಗವಿಕಲಳೆನಿಸಿ ಬಾಳಬೇಕಾದ ಸಂದರ್ಭ; ಅಂತಹ ಅಂಗವಿಕಲಳನ್ನು, ಪೊಲೀಸ್ ಅಧಿಕಾರಿಯೊಬ್ಬ, ಪ್ರೀತಿಸಿ ಜೀವನ ಸಂಗಾತಿಯನ್ನಾಗಿ ಮಾಡಿಕೊಳ್ಳುವ ಸನ್ನಿವೇಶಗಳು ಸುಂದರವಾಗಿದೆ. ಚಿತ್ರದಲ್ಲಿ ಬರುವ ಇವರ ಸಂಸಾರ "ಸಂಸಾರದಲ್ಲಿ ಅನ್ಯೋನ್ಯತೆಯೇ ಮನೆಯ ಅಡಿಪಾಯ" ಎಂಬುದನ್ನು ವ್ಯಕ್ತಪಡಿಸುತ್ತದೆ. ಅಂಗವಿಕಲಳಾಗಿ, ಪರಿಹರಿಸಲು ಸಾಧ್ಯವಿಲ್ಲದಂತಹ ದೊಡ್ಡ ಸಮಸ್ಯೆಯನ್ನು ಹೊತ್ತುಕೊಂಡರೂ ವಿಶ್ವಾಸ, ಸೌಹಾರ್ದ, ಭ್ರಾತೃತ್ವ, ಸಹಕಾರ ಮತ್ತು ಸದಾಚಾರಗಳ ಹಿನ್ನೆಲೆಯಲ್ಲಿ "ಪರಿಹಾರವಾಗು"ವುದನ್ನು 'ಪ್ರೀತಿಸಿ ನೋಡು' ಸ್ಪಷ್ಟಪಡಿಸುತ್ತದೆ. ಇಂತಹ ಸಂಸಾರವನ್ನು ಹಾಳು ಮಾಡುವವರ ಪರಿಚಯವನ್ನು ಅವರ ವಿಫಲ ಯತ್ನವನ್ನೂ ಚಿತ್ರದಲ್ಲಿ ಕಾಣಬಹುದಾಗಿದೆ. ಸಮಾಜದಲ್ಲಿರುವ ಇಂಥವರಿಗೆ "ನಡೆಯಿಲ್ಲದಿದ್ದರೂ ನುಡಿಯೊಂದನಾದರೂ ಮರೆಯಿಸು ಮಂದಿಯೆದುರು" ಎಂಬ ಮಾತು ಸಮರ್ಪಕವಾಗುತ್ತದೆ.

ಆರತಿ ಎಂದಿನಂತೆ ತಮ್ಮ ಪ್ರತಿಭೆಯನ್ನು ತೋರಿಸಿದ್ದಾರೆ. ಹೊಡೆದಾಟಗಳಲ್ಲಿ ಸಿಂಹವಾಗಿದ್ದ ವಿಷ್ಣು (ಪೊಲೀಸ್ ಅಧಿಕಾರಿಯ ಪಾತ್ರದಲ್ಲಿ) ಅದಕ್ಕಿಂತಲೂ ಉತ್ತಮವಾದ ಸೌಮ್ಯ ಅಭಿನಯವನ್ನು ತೋರಿಸಿದ್ದಾರೆ. ಶ್ರೀನಿವಾಸಮೂರ್ತಿಯವರ ಹಾಸ್ಯ ಸೂಕ್ತವಾಗಿದ್ದರೂ ಅದರ ಅತಿಯಿಂದಾಗಿ 'ಬೋರ್' ಆಗುತ್ತದೆ. ಛಾಯಾಗ್ರಹಣ ಉತ್ತಮವಾಗಿದ್ದು ಮನತಣಿಸುತ್ತದೆ. ಸಂಗೀತದಲ್ಲಿ ಮಾತ್ರ ಯಾವ ಹೊಸತನವೂ ಇಲ್ಲ. ಕನ್ನಡ ಚಿತ್ರವೆಂದರೆ ಬೇಸರ ಉಂಟಾಗುತ್ತಿದ್ದ ಸಮಯದಲ್ಲಿ 'ಪ್ರೀತಿಸಿ ನೋಡು' ಕನ್ನಡ ಚಿತ್ರಕ್ಕೊಂದು ಉತ್ತಮ ಕೊಡುಗೆಯಾಗಿದೆ.

ಶಿವಮೊಗ್ಗ ಜಿಎಸ್ಸಾರ್

• • •

'ರುದ್ರಿ' ಪಾತ್ರ ಇಷ್ಟೇನಾ? ಎಂಬುವಷ್ಟು ಸಲೀಸಾಗಿ ಮಂಜುಳಾರವರು ಅಭಿನಯಿಸಿದ್ದಾರೆ. ಚಿತ್ರದಲ್ಲಿ ಸೌಂಡ್ ರಿಕಾರ್ಡಿಂಗ್ ಸರಿಯಾಗಿಲ್ಲ ಎನಿಸುತ್ತದೆ, ಕೆಲವು ಬಾರಿ ಮಾತುಗಳು ಸರಿಯಾಗಿ ಕೇಳಿಸುವುದಿಲ್ಲ. ಅರ್ಥವಿಲ್ಲದ ಮಂಜುಳಾರ ಹೊಡೆದಾಟದ ದೃಶ್ಯಗಳು, ಇನ್‌ಸ್ಪೆಕ್ಟರಾಗಿ ಲೋಕೇಶ್‌ರವರು ಈ ಪಾತ್ರಕ್ಕೆ ನಾನೇಕೆ ಬೇಕು ಎಂದಂತೆ ಅಭಿನಯಿಸಿದ್ದಾರೆ. ಜೈಜಗದೀಶ್ ಪರವಾಗಿಲ್ಲ. ಕೆರಳಿದ ಸಿಂಹ ಚಿತ್ರ ನಿರ್ದೇಶಿಸಿದ ನಿರ್ದೇಶಕರಾದ ಚಿ. ದತ್ತುರಾಜ್ ಇಂಥ ಚಿತ್ರ ನಿರ್ದೇಶಿಸಿದ್ದಾರೆಯೇ ಎನಿಸುತ್ತದೆ. ಚಿತ್ರದಲ್ಲಿ ಹೊಸತನವೇನೂ ಕಂಡು ಬರುವುದಿಲ್ಲ. 2 ಹಾಡುಗಳು ಸುಮಾರಾಗಿ ಇವೆ

ಮಧುಗಿರಿ ವಿಶುಕುಮಾರ್

• • •

'ಕ್ಲಿಂಟ್ ಈಸ್ಟವುಡ್' ಅಥವಾ 'ಟೆಕ್ಸಾಸ್' ಮಾದರಿಯ ಸಾಹಸವನ್ನು ಕನ್ನಡದ ತೆರೆಯ ಮೇಲೆ ಮೂಡಿಸುವ ಪ್ರಾಮಾಣಿಕ ಹಾಗೂ ಸದುದ್ದೇಶಪೂರಿತ ಸಾಹಸದ ಫಲ "ಕೆಂಪು ಹೋರಿ". ಆದರೆ ಆ ಉದ್ದೇಶ ಇಲ್ಲಿ ಪೂರ್ಣ ವಿಫಲವಾಗುತ್ತದೆ. ಸಾಹಸಭರಿತ ಇಂಗ್ಲಿಷ್ ಚಿತ್ರ, "ಗುಡ್, ಬ್ಯಾಡ್ ಅಂಡ್ ಅಗ್ಲಿ" ಕನ್ನಡದಲ್ಲಿ ಭಟ್ಟಿ ಇಳಿಸಲ್ಪಟ್ಟು, ಅದರಲ್ಲಿನ ಕಿಂಚಿತ್ ಸಾಹಸದ ಅಂಶವನ್ನೂ ಇಲ್ಲಿ ತರಲಾಗದ ನಿರ್ದೇಶಕರ ಸಾಹಸ ವ್ಯರ್ಥವಾಗಿ ಅಂತಿಮವಾಗಿ ಅಪಹಾಸ್ಯಕ್ಕೀಡಾಗಿದೆ.

ಕಥೆಯಲ್ಲಿ ಸತ್ವವಿದೆ. ಬೆಳೆಸಿದ ರೀತಿಯೂ ಚೆನ್ನಾಗಿದೆ. ಆದರೆ, ಚಿತ್ರದ ಶಿರೋನಾಮೆ ಸಮರ್ಪಕವೆನಿಸುವುದಿಲ್ಲ. ಇದನ್ನು ಸರಿದೂಗಿಸುವುದಕ್ಕಾಗಿಯೇ ಕೆಲವೆಡೆ ಕಷ್ಟಪಡಲಾಗಿದೆ. ದ್ವಂದ್ವವಲ್ಲದ ಸಂಭಾಷಣೆ ಕೆಲವೆಡೆ ಮೊನಚಾಗಿಯೂ ಇದೆ.

ಕಥೆ ನಡೆಯುವ ಕಾಲದ ಬಗ್ಗೆ ನಿರ್ದಿಷ್ಟತೆ ಇಲ್ಲದಿದ್ದರೂ, ಪಾತ್ರಧಾರಿಗಳ ಉಡುಗೆ-ತೊಡುಗೆಗಳಿಂದ "20ನೇ ಶತಮಾನದ್ದೇ ಘಟನೆಗಳು" ಎಂಬುದು ನಿರ್ವಿ



ಪ್ರೀತಿಸಿ ನೋಡು : ವಿಷ್ಣುವರ್ಧನ್, ಆರತಿ

ವಾದ. ಕಥೆಗೆ ತಕ್ಕಂತೆ ಚಿತ್ರ ಭೀಭತ್ಸ ಹಾಗೂ ಸಾಹಸ ವಾಗದೆ ಲಾಗಹಾಕುತ್ತದೆ. ಭಾಷೆ ಒಂದೊಂದು ಸಾರಿ ಗ್ರಾಮ್ಯ, ಮತ್ತೆ ಕೆಲವು ಸಲ ಸುಧಾರಿತ. ಚಿತ್ರದ ಜೀವಾಳವೆನಿಸುವ, ಅತಿ ಮುಖ್ಯ ಘಟ್ಟವಾದ, ಕೊಲೆ ಪಾತಕರ ಮೇಲೆ ಸೇಡು ತೀರಿಸಿಕೊಳ್ಳುವ ಅಂತಿಮ ದೃಶ್ಯವನ್ನು, ಪ್ರೇಕ್ಷಕರು ಕುರ್ಚಿಯ ತುದಿಯಲ್ಲಿ ಕುಳಿತು ಕೊಳ್ಳುವಂತೆ ಪರಿಣಾಮಕಾರಿಯಾಗಿ ಮೂಡಿಸಬಹು ದಿತ್ತು. ಆದರೆ ಅದು ಇಲ್ಲಿ ಹಾಸ್ಯಾಸ್ಪದವಾಗಿಹೋಗಿದೆ. ಪಂಜರದಲ್ಲಿ ಹಿಡಿದು ತಂದ ದುಷ್ಟರ ದಮನದಲ್ಲಿ ನಾಯಕ ತೊಡಗಿದ್ದಾಗ, ಸುತ್ತ ನೆರೆದ ಹಳ್ಳಿಯ ಜನ "ಕೋತಿಯ ಕುಣಿತ" ಕಂಡವರಂತೆ ನಗುತ್ತಿರುತ್ತಾರೆ. ಎಷ್ಟೆಷ್ಟೋ ಕೊಲೆ, ಸುಲಿಗೆ ನಡೆಸಿದ ದುಷ್ಕರ್ಮಿಗಳನ್ನು ನಾಯಕ 'ನಂದೀಶನ' ಕೊಂಬುಗಳಿಂದ ಇರಿದು ಕೊಂದು ಸಮಾಧಿ ಮಾಡುವಾಗ ಇಲ್ಲಿಯ ವರೆಗೂ ಸುಳಿವೇ ಇಲ್ಲದ ಪೊಲೀಸರು, "ಕಾನೂನಿನ ಕೈ ಬಹಳ ಉದ್ದ" ಎಂದು ಎಲ್ಲಿ ಬಂದು ಅವನನ್ನು ಬಂಧಿಸಿಬಿಡುತ್ತಾರೋ ಎಂಬ ಹೆದರಿಕೆಯುಂಟಾಗಿತ್ತು. ಸಧ್ಯ ಆ ರೀತಿ ನಡೆಯದಿದ್ದದ್ದು ಸಂತೋಷದ ಸಂಗತಿ.

ಅಭಿನಯದಲ್ಲಿ ನಾಯಕ ಅಶೋಕ್ ತಮ್ಮ ಪಾತ್ರಕ್ಕೆ ನ್ಯಾಯ ಸಲ್ಲಿಸಲು ಕಷ್ಟಪಟ್ಟಿರುವುದು ಚೆನ್ನಾಗಿ ಅರಿವಾಗುತ್ತದೆ. ಅವರ "ರಾಜ್‌ಕುಮಾರ್" ಅನುಕರಣೆ ಎದ್ದು ಕಾಣುವ ಅಂಶ. ಮೂವರು ದುಷ್ಟರಾಗಿ ಸುಂದರ ಕೃಷ್ಣಅರಸ್, ದಿನೇಶ್ ಮತ್ತು ಶಿವರಾಂ ಇವರುಗಳ



ಕೆಂಪು ಹೋರಿ : ಅಶೋಕ್

ವಿಲಕ್ಷಣ ಅಭಿನಯ ಸಮಂಜಸ ಎಂದರೆ ತಪ್ಪಲ್ಲ. ದಿನೇಶ್ ಶಿವರಾಂ ಆಯ್ಕೆ ಸಮರ್ಪಕ. ಗ್ರಾಮ್ಯ ಹಾಗೂ ಸುಧಾರಿತ ಭಾಷೆಗಳೆರಡನ್ನೂ ಚೊಕ್ಕವಾಗಿ, ಸ್ಫುಟವಾಗಿ ನುಡಿಯುವ ಅರಸ್ ಮತ್ತು ಶಿವರಾಮರ ಗತ್ತು ಅಭಿನಂದನೀಯ. ಚಿತ್ರದ ಕೇಂದ್ರ ವ್ಯಕ್ತಿ 'ಗುರುವಿನ' ಪಾತ್ರದಲ್ಲಿ ಉದಯಕುಮಾರ್ ಬೊಜ್ಜು ದೇಹ ಪ್ರದರ್ಶಿಸುತ್ತಾ ಅಬ್ಬರ ಮಾಡುತ್ತಾರೆ. ಕನ್ನಡದ ಧೀಮಂತ, ಶ್ರೀಮಂತ ಕಲಾಕೇಸರಿಯವರ ಇಂತಹ ಶೋಚನೀಯ ಪರಿಸ್ಥಿತಿ ಕಂಡಾಗ ಅವರ ಹಿಂದಿನ ವೈಭವೋಪೇತ ಅಭಿನಯ ಸಾಮರ್ಥ್ಯದ ನೆನಪಾಗಿ, ಕರುಳು ಹಿಸುಕಿದಂತಾಯಿತು. ಮಂಜುಳ ತಮ್ಮ 'ಫೇವರಿಟ್' ಗಯ್ಯಾಳಿ "ದುರ್ಗಿ" ಪಾತ್ರದಲ್ಲಿ ತಂದೆಗೆ ತಕ್ಕ ಮಗಳಾಗಿ (ಆಕೃತಿಯಲ್ಲೂ!), ವಾಚಾಳಿಯಾಗಿ ಹೊಳೆದಿದ್ದಾರೆ. ಮಿಕ್ಕ ಪಾತ್ರಗಳಿಗೆ ಹೆಚ್ಚಿನ ಆದ್ಯತೆಯಿಲ್ಲದೆ 'ಆಟಕ್ಕುಂಟು, ಲೆಕ್ಕಕ್ಕಿಲ್ಲ' ಎನಿಸಿದೆ.

ಶಿವಮೊಗ್ಗ — ಡಿ. ಬಿ. ಶಂಕರ

* * *

ಭಾರ್ಗವ ನಿರ್ದೇಶನದ "ಪೆದ್ದ-ಗೆದ್ದ" ಚಿತ್ರ ಮಾಮೂಲಿ ಗಲ್ಲಾಪೆಟ್ಟಿಗೆ ಸೂತ್ರದ ಹಾದಿ ಹಿಡಿದಿದ್ದರೂ ಪ್ರೇಕ್ಷಕರಿಗೆ 'ಬೋರ್' ಹೊಡೆಸದೆ ಚಿತ್ರ ಮುಗಿಸಿರುವುದು ನೆಮ್ಮದಿಯ ವಿಷಯ.

ಚಿತ್ರದಲ್ಲಿ ಬಾಕ್ಸಿಂಗ್-ಹಾಡು-ನೃತ್ಯ ಇದೆ. ಕತೆಯೂ ಇದೆ. ಜನಪ್ರಿಯ ಕಲಾವಿದರಿದ್ದಾರೆ. ಎಂದಮೇಲೆ ನಿರ್ಮಾಪಕರಿಗೆ ಹಾಕಿದ ಹಣಕ್ಕೆ ಮೋಸವಿಲ್ಲ ಎನ್ನಬಹುದು. ದ್ವಾರಕೀಶ್‌ರವರು ಚಿತ್ರದ ಪ್ರತಿ ಚೌಕಟ್ಟಿ-ನಲ್ಲೂ ಕಾಣಿಸಿಕೊಂಡಿದ್ದಾರೆ. ಗೆದ್ದವನ ಪಾತ್ರಕ್ಕಿಂತ ಪೆದ್ದನ ಪಾತ್ರದಲ್ಲಿ ಪ್ರೇಕ್ಷಕರ ಅನುಕಂಪ ಗಳಿಸುತ್ತಾರೆ. ಉಳಿದ ನಟರೂ ಸಮರ್ಪಕ ಅಭಿನಯ ನೀಡಿದ್ದಾರೆ. ಸುಂದರಕೃಷ್ಣ ಅರಸ್ ತಮಗೆ ಈ ಪಾತ್ರ ಹೊಂದದು ಎನ್ನುವುದನ್ನು ತೋರಿಸಿಕೊಂಡಿದ್ದಾರೆ. ಸಂಭಾಷಣೆ ಬರೆ

## - ನಮ್ಮ ವಿಮರ್ಶಕರಿಂದ -

**ಪ್ರೀತಿಸಿ ನೋಡು**

ಬಹಳ ನಿರೀಕ್ಷಿಸಿ ನಿರಾಶರಾದ (1981) ಈ ವರ್ಷದ ಕೊನೆಯ ಚಿತ್ರ.

ಅಲ್ಲಲ್ಲಿ ಆರತಿಯವರು ಮುದ್ದಾಗಿ ಕಾಣುತ್ತಾರೆ. ಉತ್ತಮ ಕಥಾವಸ್ತುವಿದೆ. ನಿರೂಪಣೆಯಲ್ಲಿ ಅನಗತ್ಯಗಳು ಅತಿರೇಕಗಳು ಸೇರಿ ಬಂಧ ಸಡಿಲುಗೊಂಡಿದೆ. ಇಡೀ ಚಿತ್ರದಲ್ಲಿ ಶ್ರೀನಿವಾಸಮೂರ್ತಿ ಒಬ್ಬರೇ ಸಲೀಸಾಗಿ ಅಭಿನಯಿಸಿದ್ದಾರೆ. ಉಳಿದೆಲ್ಲ ಪಾತ್ರಧಾರಿಗಳೂ ಸಹಜವಾಗಿರದೆ ಬಿಗುಗೊಂಡೇ ಇರುವುದರಿಂದ ಅವು ಆತ್ಮೀಯವಾಗದೆ ಹೊರಗೇ ಉಳಿಯುತ್ತವೆ.

ಗೀತಪ್ರಿಯರು ಅತಿ ನಾಟಕೀಯತೆ – ಮಾತುಗಾರಿಕೆ ಬಿಟ್ಟು ಬೇರೆಯಾಗಿ ನಿರ್ದೇಶಿಸಿದಾಗಲೇ ಬೆಳವಣಿಗೆ ಗುರುತಿಸಬಹುದು. ನಿನ್ನೆಯ ನಾಮಬಲ ಇಂದೂ ಚಲಾವಣೆಗೆ ಬರುವುದಿಲ್ಲ.

* * *

**ರುದ್ರಿ**

ಹೊಸ ವರ್ಷ ಬಿಡುಗಡೆಯಾದ ಮೊದಲ ಕನ್ನಡ ಚಿತ್ರ. ಹೊಸತನ್ನ ಕೊಡುವ ಪ್ರಯತ್ನದಲ್ಲಿ ದುರಂತವಾಗಿದೆ. 'ಸಂಪತ್ತಿಗೆ ಸವಾಲ್'ನ ದುರ್ಗಿ ಇಲ್ಲಿ ರುದ್ರಿಯಾಗಿದೆ.

ಅರಚಾಡುವುದು, ಸೋಡಾ ಬಾಟ್ಲಿ ಹಿಡಿದು ಹೋರಾಡುವುದು, ಎಮ್ಮೆ ಮೇಲೆ ಕುಳಿತು ಹಾಡುವುದು, ಇತ್ಯಾದಿಗಳು ದುರ್ಗಿಯ ಲಕ್ಷಣಗಳು. ಈ ಲಕ್ಷಣಗಳ ಮೆರುಗು ಹೆಚ್ಚಿಸುವುದಕ್ಕೆಂದು ಹೆಣೆದ ಕಥೆ. ಅಮ್ಮನ ಕಣ್ಣಿಗಾಗಿ ಬಾಡಿಗೆ ಹೆಂಡತಿಯಾಗುವುದು, ಗಂಡನ ಕೃತ್ರಿಮಗಳು, ಅವನನ್ನು ಬಗ್ಗುಬಡಿದು ಸರಿಮಾಡುವುದು. ಮಧ್ಯೆ ಹುಟ್ಟುವ ಪೊಲೀಸ್ ಇನ್ಸ್‌ಪೆಕ್ಟರ್ ಅಣ್ಣನಾಗುವುದು. ಹೀಗೆ ಕಥೆ ಮುಂದುವರಿದು ಸುಖಾಂತವಾಗುತ್ತದೆ. 'ಕೆರಳಿದ ಸಿಂಹ'ದ ನಿರ್ದೇಶಕ ಚಿ. ದತ್ತರಾಜ್ ಈ ಚಿತ್ರದ ನಿರ್ದೇಶಕರೂ ಹೌದು.

ಚಿತ್ರ ಮುಗಿದ ಮೇಲೆ ನೆನಪಲ್ಲುಳಿಯುವುದು ಲೋಕೇಶರ ಅಭಿನಯ, ಮಂಜುಳಾ ಅತಿರೇಕ.

* * *

**ಕೆಂಪುಹೋರಿ**

ಸುಮಾರು ವರ್ಷಗಳಿಂದ ಚಿತ್ರೀಕರಣ ನಡೆದು, ಕಡೆಗೂ ಬಿಡುಗಡೆ ಕಂಡ ಮನಸ್ಸಿಗೆ ಕಿರಿಕಿರಿ ಉಂಟು ಮಾಡುವ ಚಿತ್ರ. ನಮಗೆ ಸಲ್ಲದ ಕಥೆಯನ್ನಾರಿಸುವುದೇ ನಮ್ಮವರ ಪ್ರವೃತ್ತಿ. ಇಂಥಲ್ಲಿ ಭಾರತೀಯತೆಯನ್ನು ಮರೆತು ಪಾಶ್ಚಾತ್ಯರನ್ನನುಕರಿಸುವ ಹಿಂಸೆ ಬೇರೆ. ಜಾಳು ಜಾಳಾದ ಕಥೆ. ಕನ್ನಡದ ಮಹಾನ್ ನಾಯಕರನ್ನು ಅನುಕರಿಸುವ ನಾಯಕ.

ಅಲ್ಲಲ್ಲಿ ಸುಂದರಕೃಷ್ಣರ ಅಭಿನಯ – ಆರಂಭದ ಕೆಲ ನಿಮಿಷದ ಛಾಯಾಗ್ರಹಣ ಪರವಾಗಿಲ್ಲ.

* * *

**ಪೆದ್ದ-ಗೆದ್ದ**

ಬೆಳೆಯುವ ಮನದ ಮೇಲೆ ಮನಶಾಸ್ತ್ರದ ಪ್ರಭಾವ ಕುರಿತು 'ಮಲ್ಲಮ್ಮನ ಪವಾಡ'ದಂಥ ಚಿತ್ರಗಳು ಬಂದಿವೆ. ಇದೆ ಕಥೆಯನ್ನಾಧರಿಸಿದ ತಮಿಳು ಚಿತ್ರವೊಂದರ ಸುಮಾರು ಕನ್ನಡ ಅವತರಣಿಕೆ 'ಪೆದ್ದ-ಗೆದ್ದ'. ತುರುಕಿದ ಹಾಡುಗಳು – ಮರೆತ ಕಾರ್ಮಿಕ - ಮಾಲೀಕರ ಸಂಬಂಧ ಇತ್ಯಾದಿಗಳು ಚಿತ್ರದ ಓಘಕ್ಕೆ ತೊಂದರೆ ಕೊಟ್ಟರೆ – ತಾಯ್ ನಾಗೇಶರ ಅಭಿನಯ – ಛಾಯಾಗ್ರಹಣ, ಚೇತೋಹಾರಿಯಾಗಿವೆ.

ಉಳಿದಂತೆ ಸುಂದರಕೃಷ್ಣರ ಅಭಿನಯ ಏಕತಾನತೆ ಎನಿಸಿದರೆ ಸುಂದರರಾಜ್ ಗಮನಾರ್ಹರಾಗುತ್ತಾರೆ.

ಈ ನಡುವೆ ಕನ್ನಡ ಚಿತ್ರಗಳನ್ನು ನೋಡಿ ಬೇಸತ್ತಿದ್ದ ಪ್ರೇಕ್ಷಕ ಇಲ್ಲಿ ನೆಮ್ಮದಿಯ ನಿಟ್ಟುಸಿರು ಬಿಡುತ್ತಾನೆ ಎಂಬುದು ಸಮಾಧಾನಕರ ಅಂಶ.

* * *

**ಚೆಲ್ಲಿದ ರಕ್ತ**

ನಿರ್ಮಾಪಕ ಅಬ್ಬಾಯಿ ನಾಯಿಡು ಅವರೇ ಸ್ವತಃ ಕಥೆಯನ್ನು ಬರೆದು ತಯಾರಿಸಿರುವ ಈ ಚಿತ್ರದ ಕಥೆ ಹಳಸಲೇ ಆಗಿದೆ.

ಇಬ್ಬರು ಸೋದರರು – ಒಂದು ಶಿವನ ಗುಡಿ – ಆ ಗುಡಿಯ ನಾಗಾಭರಣ ನಾಗಾಭರಣವನ್ನು ಕದ್ದು ಹಲವರನ್ನು ಕೊಂದು ದುಷ್ಟಕೂಟ ಸೋದರರಲ್ಲೊಬ್ಬನನ್ನು ತನ್ನ ಸ್ವತ್ತು ಮಾಡಿಕೊಳ್ಳುತ್ತದೆ – ಇವರು ದೊಡ್ಡವರಾದದ್ದು, ಬದುಕು, ಕುದುರೆಗಳೊಂದಿಗೆ ಕಸರತ್ತು ಮಾಡಿದ್ದು, ಮಿಲನವಾದದ್ದು ಇದು ಕಥೆಯ ಅಸ್ಥಿ. ಇದರ ಸುತ್ತ ಜೀವ - ಮಾಂಸ ತುಂಬಿಕೊಂಡಂತೆ ಬರುವ ಇತರ ಪಾತ್ರಗಳು, ಹಾಡುಗಳು, ಮುಂತಾದವುಗಳು ಒಟ್ಟಾರೆಯಾಗಿ ಏನನ್ನೂ ಹೇಳದ ಈ ಚಿತ್ರ ಚೇತೋಹಾರಿಯಾಗಿದೆ ಎಂಬುದು – ಏಕತಾನತೆಯಿಂದ ದೂರವಿದೆ ಎಂಬುದು ಒಳ್ಳೆಯ ಸಂಗತಿ. ಕಥೆಗಳನ್ನು ಆರಿಸಿ, ತಿರುಗಿಸಿ ತಿರುಗಿಸಿ ಹೇಳುವ ತಯಾರಕರ ಹಿಂದಿನ ಮನಸ್ಸುಗಳು ಯೋಚನೆ ಮಾಡಲು ಇಷ್ಟಪಡುತ್ತಿಲ್ಲವೆ ಅಥವಾ ಧೈರ್ಯ ಸಾಲದೆ ಎಂಬುದು ಪ್ರಶ್ನೆಯಾಗಿಯೆ ಉಳಿದಿದೆ.

ಚಿತ್ರದಲ್ಲಿನ ಒಳ್ಳೆಯ ಛಾಯಾಗ್ರಹಣ ಅಲ್ಲಲ್ಲಿ ಅಶೋಕ್, ರಾಮಕೃಷ್ಣ ಅಭಿನಯ ಗಮನ ಸೆಳೆದರೆ, ಮುಸುರಿ, ಮಂಜುಳಾರ ಏಕತಾನತೆ ಬೇಸರ ತರುತ್ತದೆ. ಪ್ರಭಾಕರ್ ಈ ಚಿತ್ರದ ಮೂಲಕ ಹೊಸ ಇಮೇಜ್ ಒಂದಕ್ಕೆ ದಾರಿ ಮಾಡಿಕೊಂಡಿದ್ದಾರೆ. ಒಳ್ಳೆಯ ಕೆಲಸ ತೆಗೆಯುವವರಿದ್ದರೆ ಇವರನ್ನು ಉಪಯೋಗಿಸಿಕೊಳ್ಳುವುದು ಸಾಧ್ಯವಾದೀತು.

●



ಚೆಲ್ಲಿದ ರಕ್ತ : ಮಂಜುಳಾ

ದವರೂ ಅವರ ಬಾಯಿಂದ ಕೆಲವೆಡೆ ಹಾಸ್ಯಾಸ್ಪದ ಸಂಭಾಷಣೆಯನ್ನಾಡಿಸಿ ಅವರ ಇಮೇಜ್‌ಗೆ ಧಕ್ಕೆ ತಂದಿದ್ದಾರೆ. ಡಿ. ವಿ. ರಾಜಾರಾಂರವರ ಛಾಯಾಗ್ರಹಣ ಚಿತ್ರದಲ್ಲಿ ಮನಸೆಳೆಯುವ ಅಂಶ. ಎಂತೂ, ಈ ಚಿತ್ರ ನಿರ್ಮಾಪಕ – ಪ್ರೇಕ್ಷಕ ಯಾರಿಗೂ ನಿರಾಶೆಗೊಳಿಸದೆ ಗುಟ್ಟಾಗಿ ದುಡ್ಡು ಮಾಡುವ ಚಿತ್ರ ಎಂಬುದರಲ್ಲಿ ಸಂಶಯವಿಲ್ಲ.

ಕನ್ನಡ ಚಿತ್ರರಂಗದಲ್ಲಿ ಎರಡನೆ ಪ್ರಭಾವಿ ವ್ಯಕ್ತಿಯಾಗಿ ಬೆಳೆಯುತ್ತಿರುವ ನಟ-ನಿರ್ಮಾಪಕ ದ್ವಾರಕೀಶ್‌ರವರಿಗೆ ಕನ್ನಡಿಗರ ಪ್ರೋತ್ಸಾಹ-ಅಭಿಮಾನ ಇದ್ದೇ ಇದೆ. ಇಲ್ಲಿ ಕನ್ನಡ-ಕನ್ನಡಿಗರು ಎಂಬ ಪದಗಳನ್ನು ಒತ್ತಿ ಹೇಳುವ ಉದ್ದೇಶವನ್ನು ದ್ವಾರಕೀಶ್‌ರವರು ದಯಮಾಡಿ ಅರ್ಥ ಮಾಡಿಕೊಳ್ಳಬೇಕು. ಕನ್ನಡಿಗರ ಕೂಗಿಗೆ ಓಗೊಡಬೇಕು. ಇದು ಕನ್ನಡಿಗರ ಕಳಕಳಿಯ ಪ್ರಾರ್ಥನೆ. ಕತೆಗಾಗಿ ಕನ್ನಡ ಕಾದಂಬರಿಗಳನ್ನು ಆರಿಸಿಕೊಳ್ಳಿ, ಕನ್ನಡ ಚಿತ್ರರಂಗದಲ್ಲಿಯೆ ಪ್ರತಿಭಾವಂತ ನಿರ್ದೇಶಕರಿದ್ದಾರೆ, ನಟರಿದ್ದಾರೆ, ತಂತ್ರಜ್ಞರಿದ್ದಾರೆ.

ಬೆಂಗಳೂರು — ಎಂ. ಕೆ. ವಾಸುದೇವರಾಜು

*   *   *

"ಸಮೂಹ ಮನರಂಜನೆ ಬಫೂನರಿಯೇ?" ಎಂದು ಲೇಖನವೊಂದರಲ್ಲಿ ಹಾಸ್ಯದ ಸ್ವರೂಪ-ಸೃಷ್ಟಿ-ಸನ್ನಿವೇಶ ಮತ್ತು ಪಾತ್ರದ ಕುರಿತು ದ್ವಾರಕೀಶ್‌ರವರು ಬಹಳಷ್ಟು ಚರ್ಚಿಸಿದ್ದು ಮತ್ತೆ ನೆನಪಿಗೆ ಬಂತು, ಅವರದೇ ನಿರ್ಮಾಣದ 'ಪೆದ್ದ-ಗೆದ್ದ' ಚಿತ್ರ ನೋಡುವಾಗ. 'ಮಾಸ್ ಎಂಟರ್‌ಟೈನ್‌ಮೆಂಟ್ ಬಫೂನರಿಯೇ?' ಎಂಬ ಪ್ರಶ್ನೆ ಮತ್ತೆ ಮತ್ತೆ ಮರುಕಳಿಸುವಂತಿದ್ದ ಈ ಚಿತ್ರದಲ್ಲಿ ಮಾಸ್ ಎಂಟರ್‌ಟೈನರ್ ಆಗಿ ದ್ವಾರಕೀಶ್... ಪ್ರೇಕ್ಷಕರಿಗೆ ಹಾಸ್ಯದ ಮೂಲಕ ಕಚಗುಳಿಯಿಡುವಲ್ಲಿ ವಿಫಲರಾಗಿದ್ದಾರೆ. ಪೆದ್ದು ಪೆದ್ದು ವರ್ತನೆಗಳ ಹಿರಿಮೆ(!) ಯೆಡೆಗಳಲ್ಲೇ 'ಹಾಸ್ಯ' ರಸಾಯನ ರುಚಿ ಕಳೆಕೊಂಡ ಹಾಗೆಯೇ, ಅವರ ನಟನೆ ಕುಚೇಷ್ಟೆ ಮತ್ತು ಅಣಕಕ್ಕೆ ಸೀಮಿತವಾಗಿ ಆ ಪಾತ್ರದ ಬುದ್ಧಿಮಾಂದ್ಯತೆಯ ಸ್ಪಷ್ಟ ಅರಿವು ನೀಡುವಲ್ಲಿ ಸತ್ವ ಕಳೆದುಕೊಂಡಿತ್ತು. ಆದರೂ 'ದ್ವಾರಕೀಶ್' ಚಿತ್ರ! ಏನಾದರೂ ವಿಶೇಷ ಇರಲೇಬೇಕಲ್ಲವೇ?' ಎಂದರೆ ... 'ವಿಶೇಷವಿದೆ... ಖಂಡಿತವಾಗಿಯೂ' ಎಂದು ಧ್ವನಿಗೂಡಿಸಬಹುದು. ಅದೇ "ಮುಗ್ಧ ಪ್ರೇಕ್ಷಕರನ್ನು ಮುದ್ದು(!) ಮೊದ್ದು(?) ಮಸಾಲೆಗಳಿಂದ ವಂಚಿಸುವ ವೈಖರಿ."

ರಿಮೇಕ್ ಚಿತ್ರಗಳನ್ನು ಸಾಲು-ಸಾಲಾಗಿತ್ತ ಈ ಕುಳ್ಳ ಈ ಬಾರಿ ಎಂ. ಎಸ್. ಚಕ್ರವರ್ತಿಯವರ ಕತೆಯನ್ನು ತನ್ನ ಸುತ್ತಲೇ ಹೊಸೆಸಿ-ಹೆಣೆದು-ಹೊಂದಿಸಿಕೊಂಡಿದ್ದರೂ ಪೆದ್ದು ಕತೆ ಪ್ರೇಕ್ಷಕರ ಮನ ಗೆದ್ದುಕೊಳ್ಳಲಾರದೆ ಸೊರಗುತ್ತದೆ. ದ್ವಾರಕೀಶ್‌ರನ್ನು ಈ ಪಾತ್ರದಲ್ಲಿ ಭಾಗಶಃ ನೋಡಬಹುದಷ್ಟೆ. ಪೆದ್ದ-ಗೆದ್ದವನಾದ ಮೇಲೆ ಅವರನ್ನು ಪೂರ್ಣ ಪ್ರಮಾಣದ ನಾಯಕನಾಗಿ ಕಾಣುವುದಕ್ಕೆ ನಮ್ಮ ಮನ ಒಪ್ಪದು... ಅದೂ ಆರತಿಯವರೆದುರು!! ದ್ವಾರಕೀಶ್‌ರವರ ವ್ಯಕ್ತಿತ್ವ ಮೊದ್ದು ಪಾತ್ರಕ್ಕೆ, ಕೆಟ್ಟ ಹಾಸ್ಯಕ್ಕೆ ಸರಿ.

ಪೆದ್ದ ಜವಾಬ್ದಾರಿಯುತ ಸ್ಥಾನ ಪಡೆಯುವವರೆಗಿನ ಹಲವು ಹಂತಗಳಲ್ಲಿ, ಮೂವರು ನಾಯಕರೊಂದಿಗೆ ಪೆದ್ದುಪೆದ್ದಾಗಿ ವರ್ತಿಸಿ ಮಜಮಾಡುವ, ಇಬ್ಬರು ವಿಲನ್‌ಗಳೊದಿಗೆ ಮುಸುಕಿನೊಳಗೆ ಗುದ್ದಾಡುವ, ಪೋಷಕ ಪಾತ್ರಗಳಿಂದ ಪೋಷಿಸಲ್ಪಡುವ ವಿಭಿನ್ನ ತಿರುವುಗಳಲ್ಲಿ ವೈವಿಧ್ಯತೆಯಿದೆ ನಿರ್ದೇಶನದಲ್ಲಿ. ಆದರೆ ಪೆದ್ದ... ನಮಗೆ ಬುದ್ಧಿಯಿರುವ ಪೆದ್ದನಾಗಿ ಕಾಣುವುದೇ ವಿಪರ್ಯಾಸ (ಪ್ರಾಸಬದ್ಧ ಹಾಡು ಹಾಡುವುದಿಲ್ಲವೆ ಈ ಪೆದ್ದ?)

ಚಿತ್ರಗಳಲ್ಲಿ ಯಾವ್ಯಾವ ಸೂತ್ರಗಳನ್ನು ಹೇಗ್ಹೇಗೆ ಬಳಸಿಕೊಳ್ಳಬೇಕೆಂಬ ತಂತ್ರ ದ್ವಾರಕೀಶ್‌ಗೆ ಚೆನ್ನಾಗಿ ಗೊತ್ತಿದೆ. ಮಧುಮಾಲಿನಿ, ಜಯಮಾಲಾರನ್ನು ಪಾತ್ರಕ್ಕಿರುವ ಅಗತ್ಯಗಳ ಮೇರೆ ಮೀರುವಂತೆ ಕುಣಿಸುತ್ತಾರೆ.

ನಟನೆಯಲ್ಲಿ ತಾಯ್ ನಾಗೇಶ್‌ರವರು ಕ್ಷಣದಲ್ಲಿ ಮಾಡಿದ್ದನ್ನು ದ್ವಾರಕೀಶ್‌ರವರು ಚಿತ್ರದುದ್ದಕ್ಕೂ ಮಾಡಿದರೆ? ಪೆದ್ದನ ಬಾಳಿನಲ್ಲಿ ಜ್ಯೋತಿಯಾಗಿ ಬೆಳಗಿ ಗಮನ ಸೆಳೆಯುವ ಆರತಿ ಚಿತ್ರದ ಆಗುಹೋಗುಗಳಿಂದ ಪ್ರತ್ಯೇಕವಾಗುಳಿದರೂ ಚಿತ್ರದ ಓಟದಲ್ಲಿ ಅವರ ಪ್ರಭಾವ ಪ್ರಾಮುಖ್ಯವಾದುದು ಪೆದ್ದ-ಗೆದ್ದದ ಪೆದ್ದು ಇಮೇಜಿಗಿಂತಲೂ `ಗಣನೀಯವಾದ ಇಮೇಜ್ ಅವರದು? ಜಯಮಾಲಾ ತುಂಬ ತುಂಬ ಅಗ್ಗವಾಗುತ್ತಿದ್ದಾರೆ. ಹೆಣ್ಣಾಗಿ ಕ್ಯಾಮರಾ ಮತ್ತು ಪ್ರೇಕ್ಷಕರ ಕಣ್ಣಿಗೆ (ಆಕೆ ನಮ್ಮವರೇ ಆದುದರಿಂದ ಹೀಗೆ ಹೇಳಬೇಕಾದುದು ಅನಿವಾರ್ಯ. ಕನ್ನಡ ಚಿತ್ರರಂಗ ಹಿಂದಿ-ಮಲಯಾಳಂ ಚಿತ್ರಕ್ಷೇತ್ರಗಳಂತಲ್ಲವಲ್ಲ) ಮಧುಮಾಲಿನಿ ಅಂತಹ ಉಡುಪು-ತೊಡುಪುಗಳಿಲ್ಲದೆಯೇ ನಟಿಸಬಹುದಿತ್ತು... ಕುಣಿಯಬಹುದಿತ್ತು. ಕಾಂಚನವವರ ಅಸಹಾಯಕತೆ-

ನಟನೆ ಎಲ್ಲವೂ ಸಹಜ. ಸುಂದರಕೃಷ್ಣ ಅರಸ್ ಮತು
ಸುಂದರ್‌ರಾಜ್ ನಡುವಣ ಹೊಂದಾಣಿಕೆ ಸಹಿ
ಲಾಗದ್ದು. ಹದವರಿತ ನಟನೆ ರಾಜಾನಂದ್- ಲೋ
ನಾಥ್‌ರದು. ವಿಷ್ಣು-ಭಾರತಿಯವರನ್ನು ಎಷ್ಟೋ ದಿ
ಗಳ ನಂತರ ಉತ್ತಮ ಪಾತ್ರದಲ್ಲಿ ಕಂಡೆವೆನ್ನಬೇಕು.

ಡಿ. ವಿ. ರಾಜಾರಾಂರವರ ಛಾಯಾಗ್ರಹಣ ಚಿತ್
ದಲ್ಲಿನ ಮೆಚ್ಚುಗೆಯ ಅಂಶಗಳಿಗೆ ಸೇರಲೇಬೇಕು. ಹೊ
ತನವೇನೂ ಇಲ್ಲದ ಈ ಸಂಗೀತಕ್ಕೆ ವಿ. ಮಹಾದೇವನ್
ಬೇಕಾಗಿತ್ತೆ? ಉದಯಶಂಕರ್ ಅವರ ಸಂಭಾಷಣ
ಚೆನ್ನಾಗಿತ್ತು.

'ಪೆದ್ದ-ಗೆದ್ದ'ಎನ್ನುವುದಕ್ಕೆ ಗಮನೀಯವಾಗಿ ನಿರ್ದೇ
ಶಕ ಭಾರ್ಗವ, ಛಾಯಾಗ್ರಾಹಕ ಡಿ. ವಿ. ರಾಜಾರಾ
ತಾಯ್ ನಾಗೇಶ್, ವಿಷ್ಣು-ಭಾರತಿ, ಆರತಿ, ಕಾಂಚನಾ
ರಾಜಾನಂದ್ ಕಾರಣರಾಗುತ್ತಾರೆ.

ಮೇಲದಂಗಡಿ, ಉಳ್ಳಾಲ — ಇದ್ದಿಮೋನ್

(ಬಹುಮಾನಿತ ವಿಮರ್ಶೆ)

*   *   *

ಅಚ್ಚುಕಟ್ಟಾದ ನಿರ್ಮಾಣಕ್ಕೆ ಇನ್ನೊಂದು ಹೆಸರೆಂದು
ಖ್ಯಾತಿ ಗಳಿಸಿರುವ 'ಅಬ್ಬಾಯಿ ನಾಯ್ಡು' ರವರ ಚಿತ್ರ
ವೆಂದರೆ ಪ್ರೇಕ್ಷಕರ ನಿರೀಕ್ಷೆ ಸಾಧಾರಣವಾದುದೇನಲ್ಲ
ತಯಾರಿಕೆಗಾಗಿ ಆಯ್ದುಕೊಳ್ಳಲಾಗುತ್ತಿದ್ದ ಕತೆಗಳಲ್
(ರಾಜಾ ನನ್ನ ರಾಜ, ಸೀತಾರಾಮು, ಮೂಗನ ಸೇಡು)
ಸ್ವಲ್ಪ ಮಟ್ಟಿನ ನಾವೀನ್ಯವಿರುತ್ತಿದ್ದುದು ಈ ನಿರೀಕ್
ಯನ್ನು ಬಲಪಡಿಸಿದ ಅಂಶ. ಅಂತೆಯೇ ಪ್ರೇಕ್ಷಕ
ಈ ನಂಬಿಕೆಯನ್ನು ಉಪಯೋಗಿಸಿಕೊಂಡು ತಯಾರಾದ
ಚರ್ವಿತ ಚರ್ವಣವೆಂಬಂತಹ ಕಥೆಯ "ತಾಯಿಯ
ಮಡಿಲಲ್ಲಿ" ನಿರೀಕ್ಷೆಗೂ ಮೀರಿ ಯಶಸ್ವಿಯಾಯಿತು
ಇದನ್ನೇ 'ಗ್ರೀನ್ ಸಿಗ್ನಲ್' ಎಂದು ಬಗೆದ ನಿರ್ಮಾಪಕರ
ಮತ್ತೆ ತೆರೆ ಕಾಣಿಸಿರುವ "ಚೆಲ್ಲಿದ ರಕ್ತ"ವೂ ಎಂದೋ
ಚೆಲ್ಲಿ ಹೆಪ್ಪುಗಟ್ಟಿದ ರಕ್ತವೇ! ಪ್ರಭಾಕರ್ ಅವರ ಅತ್ಯಂ
ವಿಶಿಷ್ಟ ಬಗೆಯ ಪಾತ್ರಾಭಿನಯ ಮತ್ತು ಸತ್ಯಂ ಸಂಗೀ
ನಿರ್ದೇಶನದಲ್ಲಿ ಒಂದು ಹಾಡು – ಇಷ್ಟೇ ಚಿತ್ರದ
'ಹೈಲೈಟ್'ಗಳು. ವಿ. ಎಸ್. ಆರ್. ಸ್ವಾಮಿಯವ
ಛಾಯಾಗ್ರಹಣದಲ್ಲಾಗಲೀ, ಚಿ. ಉದಯಶಂಕರ್
ಸಂಭಾಷಣೆಯಲ್ಲಾಗಲೀ, ಹೆಸರಿಸುವಂತಹುದೇನ
ಕಾಣಲಿಲ್ಲ. ಅಶೋಕ್, ಲೀಲಾವತಿ, ಮಂಜುಳಾ,
ವಿಜಯಾ, ಮುಸುರಿ ಕೃಷ್ಣಮೂರ್ತಿ, ರಾಮಕೃಷ್
ಉದಯಕುಮಾರ್ ಮುಂತಾದ ಎಲ್ಲರ ಪಾತ್ರಗಳ
ಸೂತ್ರಬದ್ಧ ಫಾರ್ಮುಲಾ ಕಥೆಗೆಂದೇ ಹೇಳಿ ಬರೆಸಿ
'ಬ್ರಾಂಡ್' ಪಾತ್ರಗಳಂತಿವೆ.

'ಶೋಲೆ' ಚಿತ್ರದ ಪ್ರಭಾವ ನಿರ್ಮಾಪಕರಿಗೆ ಸ್ಫೂರ್ತಿ
ನೀಡಿದೆಯೆಂಬ ಅಂಶ ಸುಸ್ಪಷ್ಟ. ಇಷ್ಟಾಗಿ 'ಚೆಲ್
ಪಾತ್ರದಲ್ಲಿ ಕಾಣಿಸಿಕೊಳ್ಳುವ ಬಯಕೆ ನಿರ್ಮಾಪಕರಿಗೇ
ಬಂತೋ? ಈಗಾಗಲೇ ಇಂತಹ ಚಿತ್ರಗಳು ಲೆಕ್ಕವಿ
ದಷ್ಟು ಸಂಖ್ಯೆಯಲ್ಲಿ ಬಂದು ಹೋಗಿರುವುದರಿಂ
ನಿರ್ದೇಶಕ ಸುಬ್ಬರಾವ್ ಯಾವೊಂದು ತ್ರಾಸವೂ ಇಲ್ಲ
ಚಿತ್ರವನ್ನು ನಿರ್ದೇಶನ(?) ಮಾಡಿದ್ದಾರೆ. ದುಡ
ಕೊಟ್ಟು ನೋಡುವ ಪ್ರೇಕ್ಷಕರನ್ನು ವಂಚಿಸದಿದ್ದರ
'ಕೊಟ್ಟಿದ್ದೆಲ್ಲಾ ಸ್ವೀಕರಿಸುತ್ತಾರೆ' ಎಂದು ಇದೇ ಬಗೆ
ಹಳೆಯ ಸರಕುಗಳನ್ನು ಇನ್ನು ಮುಂದೆಯೂ ನೀಡುತ
ಹೋದಲ್ಲಿ ನಿರ್ಮಾಪಕರು ಜನರ ನಂಬಿಕೆಯನ್ನು ಕಳೆ
ಕೊಂಡರೆ ಆಶ್ಚರ್ಯ ಪಡಬೇಕಿಲ್ಲ

ಮೈಸೂರು — ಎನ್. ವಿಜಯ ಕುಮಾ

ROOPATARA, Kannada Film Monthly
REGD. No. R. N. 29737/77

FEBRUARY 1982
KRNR : 15